# ನಂದಾದೀಪದ ನಂದಿನಿ







ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

ಸರ್ವೋದಯ ಸಾಹಿತ್ಯಮಾಲೆ ಪುಷ್ಪ ೪.

# ನಂದಾದೀಪದ ನಂದಿನಿ

## (ವಿಜಯಲಕ್ಷ್ಮೀ ಪಂಡಿತ್)

ಲೇಖಕರು: ಕೆ. ಶ್ರೀಧರ

ಮೇ, ೧೯೪೯

ಬೆಲೆ: ೧—೪—೦

ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

# ಪ್ರಕಾಶಕರ ಅರಿಕೆ.



ನಮ್ಮ ಗ್ರಂಥಮಾಲೆಯ ಚಂದಾದಾರರಿಗೆ "ನಂದಾದೀಪದ ನಂದಿನಿ" ಎಂಬ ಹೆಸರಿನ ಈಹೊಸ ಪುಸ್ತಕವನ್ನು ಅರ್ಪಿಸಲು ನಮಗೆ ಸಂತೋಷ ವೆನಿಸುತ್ತದೆ ಮೊದಲನೇ ವರುಷದಲ್ಲಿ, ಮೂರು ತಿಂಗಳಿಗೊಂದರಂತೆ ಒಟ್ಟು ನಾಲ್ಕು ಗ್ರಂಥಗಳನ್ನು ಕೊಡುವ ನಮ್ಮ ಯೋಜನೆಯು ಇಂದಿಗೆ ಫಲಿಸಿದಂತಾಯಿತು. ೧೯೪೮ ರ ಆಗಸ್ಟ್ ೧೫ ನೇ ಸ್ವತಂತ್ರ್ಯ ಉತ್ಸವದ ಶುಭದಿನ ಆರಂಭವಾಗಿರುವ ಈ ಸರ್ವೋದಯ ಸಾಹಿತ್ಯ ಮಾಲೆಯಲ್ಲಿ ಈಗಾಗಲೇ (೧) ಕ್ರಿಸ್ಮಸ್ ಕಾಣಿಕೆ ಮತ್ತು ಇತರ ಕತೆಗಳು (೨) ಬದು ಕಿನದಾರಿ ೩) ಮರುಭೂಮಿಯ ಅಂಬರು ಈ ಮೂರು ಪುಸ್ತಕಗಳು ಅರಳಿವೆ ಹೊತ್ತಿಗೆ ಸರಿಯಾಗಿ ನಾವು ಅವನ್ನು ನಮ್ಮೆಲ್ಲ ಗ್ರಾಹಕರಿಗೆ ಕಳಿಸಿರುವೆವು. ಆದರೆ, ನಮ್ಮ ಕೈ ತಪ್ಪಿನಿಂದಲೇ ಆಗಲಿ, ಅಂಚೆಯ ಅನಾನುಕೂಲತೆಯಿಂದಲೇ ಆಗಲಿ, ಅಥವಾ ಇನ್ನಿತರ ಯಾವ ತೊಂದರೆ ಯಿಂದಲೇ ಆಗಲಿ, ಆ ಗ್ರಂಥಗಳು ನಮ್ಮ ಕೆಲವು ಗ್ರಾಹಕರಿಗೆ ಮುಟ್ಟದೇ ಇರಬಹುದು. ಹಾಗಿದ್ದರೆ ಅವರು ಕೂಡಲೇ ನಮಗೆ ಪತ್ರದ ಮೂಲಕ ಅಥವಾ ಭೆಟ್ಟಿಯಾದಾಗ ತಿಳಿಸಿ ಆ ಪುಸ್ತಕಗಳನ್ನು ದಯವಿಟ್ಟು ಪಡೆದು ಕೊಳ್ಳಬೇಕೆಂದು ವಿನಂತಿ.

**ಎರಡನೇ** ವರುಷದ **ಯೋಜನೆ**

ಇದೇ ಆಗಸ್ಟ್ ೧೫ (೧೯೪೯) ರಿಂದ ಸಾಹಿತ್ಯ ಮಾಲೆಯ ಎರ ಡನೇ ವರುಷವು ಆರಂಭವಾಗುತ್ತದೆ ಈ ಎರಡನೇ ವರುಷದಲ್ಲೂ ನಾವು ಮೂರು ತಿಂಗಳಿಗೊಂದರಂತೆ ಒಟ್ಟು ನಾಲ್ಕು ಗ್ರಂಥಗಳನ್ನು ಪ್ರಕಟಿಸು ವೆವು. ಮೊದಲನೇ ವರುಷದ ನಾಲ್ಕು ಗ್ರಂಥಗಳಲ್ಲಿ ಒಂದು ಚಿಕ್ಕ ಕತಾ

ಸಂಗ್ರಹ, ಒಂದು ಕಾದಂಬರಿ, ಒಂದು ರಾಜಕೀಯ ಹಾಗೂ ನಾಲ್ಕನೆ ಯದು ಜೀವನ ಚರಿತ್ರೆ ಹೀಗೆ ವೈವಿಧ್ಯವಿರುವುದನ್ನು ನಮ್ಮ ಗ್ರಾಹಕರು ಕಂಡಿರುವರು. ಅಂದವಾದ ಕಾಗದ, ಹೊದಿಕೆಗಳನ್ನು ಒದಗಿಸಿದ್ದೇವೆ. ಎರಡು ಮೂರು ಬಣ್ಣಗಳಿಂದ ಮುಖಚಿತ್ರಗಳನ್ನು ಮುದ್ರಿಸಿರುವೆವು ಗ್ರಂಥಗಳಲ್ಲಿ ರೇಖಾಚಿತ್ರ, ನಕಾಶೆ, ವ್ಯಂಗ್ಯಚಿತ್ರಗಳನ್ನು ಬರೆಯಿಸಿರುವೆವು. ಇದಕ್ಕೆ ನಾವು ಬಹಳ ಹಣ ವೆಚ್ಚಮಾಡಿರುವೆವೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಗ್ರಂಥಗಳು ಅಂತರಂಗ ಹಾಗೂ ಬಹಿರಂಗ ಸೌಂದರ್ಯಗಳಿಂದ ರಸಭರಿತ ಮತ್ತು ಮನಮೋಹಕವಾಗಬೇಕೆಂಬುದೇ ನಮ್ಮ ಆಶೆ. ಈ ಬಯಕೆ ಮೊದಲನೇ ವರುಷದಲ್ಲಿ ಸಂಪೂರ್ಣ ನೆರವೇರಿದೆಯೆಂಬ ತೃಪ್ತಿ ನಮಗಿಲ್ಲ ಅಂದವಾದ ಮುದ್ರಣದ ಕೊರತೆ ಒಂದೊಂದು ಕಡೆ ಸುಳಿದುದುಂಟು. ಇನ್ನಿತರ ಅನೇಕ ಲೋಪದೋಷಗಳೂ ಇರಬಹುದು; ಇದ ಎಂದೂ ಒಪ್ಪಿಕೊಳ್ಳಲು ಬಯಸುವೆವು. **ಮೊದಲನೇ ವರುಷಕ್ಕಿಂತಲೂ ಸರ್ವಾಂಗ ಸುಂದರವಾದ ಹಾಗೂ ನಾನಾ ವೈವಿಧ್ಯಗಳಿಂದ ಕೂಡಿದ ನವರಸಭರಿತ ಸಾಹಿತ್ಯಕೃತಿಗಳನ್ನು ನಮ್ಮ ಗ್ರಾಹಕರ ತಾವರೆ ಕೈಗಳಿಗೆ ಅರ್ಪಿಸಲು ಸರ್ವ ವಿಧದಿಂದಲೂ ಈ ಎರಡನೆ ವರುಷದಲ್ಲಿ ದುಡಿಯುವೆವು.**

## ಕೃತಜ್ಞತೆ

ಯಾವ ಉದ್ಯಮವಾದರೂ ಯಶಸ್ವಿ ಹೊಂದಬೇಕಾದರೆ ಅದಕ್ಕೆ ಜನ ಸಹಾಯ ಅತ್ಯಗತ್ಯ. ಜನರ ಸ್ನೇಹ, ಸಹಾನುಭೂತಿ, ಸಹಕಾರಗಳಿದ್ದರೆ ಮಾತ್ರ ಅದು ಶಕ್ಯ. ಕಾರ್ಯ ಸಾಧಿಸಲು ಧೈರ್ಯ ಉತ್ಸಾಹಗಳು ಬರುತ್ತವೆ. ಮೊದಲನೇ ವರುಷದಲ್ಲಿ ನಾವು ಕನ್ನಡನಾಡಿನ ಕೆಲವು ಭಾಗಗಳಿಗೆ ಮಾತ್ರ ತೆರಳಿದ್ದೆವು ನಾವು ಹೋದಲ್ಲಿ ನಮಗೆ ಅನೇಕ ಸನ್ಮಿತ್ರರೂ, ಬಂಧುಗಳೂ ಉದಾರಾಶ್ರಯ ಕೊಟ್ಟಿರುವರಲ್ಲದೆ. ಕೊಡುಗೈ ದೊರೆಗಳಲ್ಲಿ ನಮ್ಮನ್ನು ಕರೆದೊಯ್ದು ನಮಗೆ ಚಂದಾದಾರರನ್ನು ಮಾಡಿಕೊಟ್ಟಿರುವರು. ಈ ಸಂದರ್ಭದಲ್ಲಿ ಅವರೆಲ್ಲರನ್ನೂ ಸ್ಮರಿಸಿಕೊಂಡು ಅಭಿವಂದನೆಗಳನ್ನು ಸಲ್ಲಿಸುತ್ತೇವೆ. ನಮ್ಮ ಮೇಲಿನ ಪ್ರೀತಿ ವಿಶ್ವಾಸದಿಂದ ಚಂದಾದಾರರಾಗಿ, ಪೋಷಕರಾಗಿ,

ಹಿತಚಿಂತಕರಾಗಿ,ಅಜೀವ ಸದಸ್ಯರಾಗಿ ಸಹಾಯ ಸಲ್ಲಿಸಿ ನೆರವಾದವರೆಲ್ಲರಿಗೂ ಕೃತಜ್ಞತೆಗಳು. ನಮ್ಮ ಮಾಲೆಯ ಪುಸ್ತಕಗಳನ್ನು ಸ್ವಾಗತಿಸಿ ಹರಸಿದ ಕನ್ನಡನಾಡಿನ ಸಹೃದಯರಾದ ಅನೇಕ ಹಿರಿಕಿರಿಯ ಸಾಹಿತಿಗಳಿಗೂ ಪತ್ರಿಕೆಗಳ ಸಂಪಾದಕರಿಗೂ ನಮ್ಮ ಅನಂತ ಆತ್ಮೀಯ ನಮಸ್ಕಾರಗಳು

**ಸಹಾಯ ಯೋಜನೆ**

ನಮ್ಮ ಯೋಜನೆ ಯಶಸ್ವಿಯಾಗುವಂತೆ ಕನ್ನಡನಾಡಿನ ಜನ ಕೊಡುಗೈಯಿಂದ ಧನ ಸಹಾಯ ಮಾಡಬೇಕೆಂದು ನಮ್ಮ ಅರಿಕೆ. ಸರ್ವರಿಗೂ ಅನುಕೂಲವಾಗುವಂತೆ ಈ ರೀತಿಯ ಒಂದು ಸಹಾಯ ಯೋಜನೆಯನ್ನು ತಯಾರಿಸಿರುವೆವು. ೧ ಅಜೀವ ಸದಸ್ಯರು ರೂ. ೧೦೦ ಮತ್ತು ಅದಕ್ಕಿಂತ ಅಧಿಕ ಕೊಡುವರು ೨ ಆಶ್ರಯದಾತರು ರೂ ೫೦ (೧೩ ವರುಷ ಅವರಿಗೆ ಗ್ರಂಥ ಅರ್ಪಣೆ) ೩ ಹಿತಚಿಂತಕರು ರೂ. ೨೫ (೭ ವರುಷ ಅವರಿಗೆ ಗ್ರಂಥ) ೪ ಪೋಷಕರು ರೂ. ೧೦ (೩ ವರುಷ ಅವರಿಗೆ ಗ್ರಂಥ) ಚಂದಾದಾರರು ರೂ. ೫ (ಅಂಚೆ ವೆಚ್ಚ ಕೂಡಿ) ಹಣವನ್ನು ಮನಿಯಾರ್ಡರ್ ಮಾಡಿ ಕಳಿಸಿದರೇ ಉತ್ತಮ.

ನಮಗೆ ಇಷ್ಟರ ವರೆಗೆ ಸಹಾಯ ನೀಡಿದ ಎಲ್ಲ ಮಿತ್ರರಿಗೂ, ಚಂದಾದಾರರು ಪೋಷಕರು, ಹಿತಚಿಂತಕರು, ಅಜೀವ ಸದಸ್ಯರಿಗೂ ಚಿರ ಋಣಿಗಳಾಗಿದ್ದೇವೆ ಅವರ ಸಹಾಯ ಸಹಕಾರ ಮುಂದೆ ಕೂಡಾ ದೊರೆಯಲೆಂದು ಪ್ರಾರ್ಥನೆ.

ಮೇ, ೧೯೪೯
ಹುಬ್ಬಳ್ಳಿ

ಪ್ರಕಾಶಕರು.

# ಲೇಖಕನ ಮಾತು

ವಿಜಯಲಕ್ಷ್ಮಿ ಪಂಡಿತಳ ಹೆಸರನ್ನು ಅರಿಯದವರು ವಿರಳ. ಅವಳನ್ನು ರಶಿಯಾದಲ್ಲಿ ರಾಯಭಾರಿಯಾಗಿ ನೇಮಿಸಿ ಸ್ವತಂತ್ರ ಭಾರತವು ಗೌರವಿಸಿತು. ಆ ಮೇಲೆ ಅಮೇರಿಕೆಗೆ ಭಾರತದ ರಾಯಭಾರಿಯಾಗಿ ತೆರಳಿದಳು. ಭಾರತದ ಪ್ರಧಾನಮಂತ್ರಿ ಜವಾಹರಲಾಲರ ತಂಗಿಯೆಂಬ ಕಾರಣದಿಂದ ಅವಳು ಈ ಘನತೆಗೇರಿರುವಳೆಂದು ಹೇಳುವ್ರದು ಸರಿಯಲ್ಲ. ಇನ್ನಾರಾದರೂ ಪ್ರಧಾನಮಂತ್ರಿಯಾಗುತಿದ್ದರೆ ಅವಳನ್ನು ನೇಮಿಸದೆ ಬಿಡುತಿರಲಿಲ್ಲ. ಏಕೆಂದರೆ, ಅವಳ ವ್ಯಕ್ತಿತ್ವ ಅಸಾಧಾರಣವಾದುದು. ವಿದ್ಯಾಬುದ್ಧಿ, ವಿನಯ, ಸಂಯಮಗಳಿಂದ ಅವಳ ಜೀವನವು ಬಹಳ ಆದರ್ಶವಾಗಿದೆ. ಉಜ್ವಲ ದೇಶಾಭಿಮಾನಿ. ಗಾಂಧೀಜಿಯವರು ಹೂಡಿದ ಸ್ವಾತಂತ್ರ್ಯ ಹೋರಾಟದಲ್ಲೂ ಅವಳು ಬಹುಮುಖ್ಯ ಪಾತ್ರ ವಹಿಸಿರುವಳು. ಆ ಉದ್ದೇಶ ಸಾಧನೆಗಾಗಿ ಅಪಾರ ಕಷ್ಟ ಪರಂಪರೆಗಳನ್ನು ಅನುಭವಿಸಿರುವಳು. ತನ್ನ ಸೇವಾತ್ಯಾಗಗಳಿಂದ ಜನಾಂಗದ ಮನೋಮಂದಿರದಲ್ಲಿ ಮಹೋನ್ನತ ಸ್ಥಾನಮಾನ ಗಳಿಸಿರುವುದೂ ಸುಳ್ಳಲ್ಲ. ಇಂಥ ಅಸಾಧಾರಣ ವೀರರಮಣಿ ರಾಯಭಾರಿಯಾಗಿ ನೇಮಿಸಲ್ಪಟ್ಟಿರುವುದು ಆಶ್ಚರ್ಯಕರ ಸಂಗತಿಯಲ್ಲ. ಅವಳ ಪ್ರತಿಭೆ ಮತ್ತು ಯೋಗ್ಯತೆಯನ್ನು ದೇಶವಿದೇಶಗಳ ಜನರೂ ಪತ್ರಿಕೆಗಳೂ ಕೊಂಡಾಡಿದುದುಂಟು. ರಾಷ್ಟ್ರಸಂಘದಲ್ಲಿ ದಕ್ಷಿಣ ಆಫ್ರಿಕದ ವರ್ಣದ್ವೇಷದ ಧೋರಣವನ್ನು ಖಂಡಿಸಿ ಅವಳು ಮಾಡಿದ ಮಹಾಪುಣ್ಯಕಾರ್ಯದಿಂದ ಅಮೇರಿಕನ್ನರು ಮುಗ್ಧರಾಗಿ ಹೋದರು. "ಪೌರ್ವಾತ್ಯ ದೇಶದಿಂದ ನಂದಾದೀಪದ ನಂದಿನಿ ಬಂದು ಕಗ್ಗತ್ತಲೆಯ ಮೇಲೆ ಬೆಳಕು ಬೀರಿದಳು" ಎಂದು ಅಮೇರಿಕನ್ ಪತ್ರಿಕೆಗಳು ಬರೆದುವು. ನನ್ನ ಈ ಕಿರಿಹೊತ್ತಿಗೆಗೆ ಅದೇ ಪರಮೋಚಿತ ಹೆಸರನ್ನಿಟ್ಟಿದ್ದೇನೆ. ಭಾರತದ ಈ ವೀರರಮಣಿಯ ಚರಿತ್ರೆ ನನ್ನ ನಾಡಿನ ಅಕ್ಕತಂಗಿಯರಲ್ಲಿದ್ದ ದೇಶಾಭಿಮಾನವನ್ನು ಇನ್ನಷ್ಟು ಬೆಳಗಿಸಲೆಂದೇ ನನ್ನ ಆಶೆ.

ಮಂಗಳೂರು )
ಮೇ, ೧೯೪೯ )

ಕೆ. ಶ್ರೀಧರ

# ಅನುಕ್ರಮಣಿಕೆ.

# ನಂದಾದೀಪದ ನಂದಿನಿ

## ೧. ಮನೆತನದ ಹಿನ್ನೆಲೆ

ಭಾರತದ ಇತಿಹಾಸದಲ್ಲಿ ನೆಹರು ಮನೆತನಕ್ಕೆ ಮಹೋನ್ನತ ಸ್ಥಾನ ಇದೆ. ಒಮ್ಮೊಮ್ಮೆ "ಅದು ಬೇರ. ಇದು ಬೇರೆ" ಯೆಂದು ಪ್ರತ್ಯೇಕಿಸಲೂ ಶಕ್ಯವಿಲ್ಲ. ಒಂದಕ್ಕೊಂದು ಅಷ್ಟು ಹೊಂದಿಕೊಂಡಿದೆ. ಈ ಮನೆತನದಲ್ಲಿ ಜನಿಸಿದ ಗಂಡು ಹೆಣ್ಣುಗಳೆಲ್ಲ ವೀರಾದಿವೀರರು. ದೇಶದ ರಾಜಕೀಯ ರಂಗ ದಲ್ಲಿ ಅವರು ವೀರೋದಾತ್ತ ಆಟಗಳನ್ನಾಡಿರುವರು. ಎಲ್ಲರೂ ಐತಿಹಾಸಿಕ ವ್ಯಕ್ತಿಗಳು ಈ ವಂಶಕ್ಕೆ ತಿಲಕ ಪ್ರಾಯರು. ವಿಜಯ ಲಕ್ಷ್ಮಿಯು ಜೀವನ ಮತ್ತು ಕಾರ್ಯಗಳು ಕೂಡಾ ಈ ವಂಶದ ವಿಜಯ ದುಂದುಭಿಗಳನ್ನೇ ಮೊಳಗುತ್ತಿವೆ.

**ಕಾಶ್ಮೀರಿನಿಂದ ಇಳಿದವರು**

' ನಾವು ಕಾಶ್ಮೀರಿಗಳಾಗಿದ್ದೆವು" ಎಂದು ನೆಹರು ತಮ್ಮ ಆತ್ಮ ಚರಿತ್ರೆ ಯಲ್ಲಿ ಬರೆದು ತಮ್ಮ ಮೂಲವನ್ನು ವಿವರಿಸಿರುವರು. ಎರಡು ನೂರು ವರ್ಷ ಗಳ ಹಿಂದೆ ಈ ಮನೆತನದ ಹಿರಿಯರು ಕಾಶ್ಮೀರಿನಿಂದ ಇಳಿದು ಬಂದರು. ಅದಕ್ಕೂ ಒಂದು ಕಾರಣವಿದೆ ಔರಂಗಜೇಬನು ಅಳಿದ ಮೇಲೆ ಪಟ್ಟಕ್ಕೆ ಬಂದ ಫರೂಕಸಿಯರ್ ದೊರೆ, ಒಮ್ಮೆ ಕಾಶ್ಮೀರಿಗೆ ತೆರಳಿದ್ದ ಆಗ, ಪರ್ಶಿ ಯನ್ ಮತ್ತು ಸಂಸ್ಕೃತ ಭಾಷಾ ವಿಶಾರದರಾಗಿದ್ದ ರಾಜಾ ಕೌಲ್ ರವರ ಹೆಸರನ್ನು ಯಾರೋ ಅರುಹಿದರು. ದೊರೆ ಆಕರ್ಷಿಸಲ್ಪಟ್ಟು ಕೌಲ್‌ರ ಪರಿಚಯ ಮಾಡಿಕೊಂಡ ಅದು ಸ್ನೇಹವಾಗಿ ಕೂಡಾ ಬೆಳೆಯಿತು ಪ್ರಾಯಶಃ ದೊರೆಯ ಆಮಂತ್ರಣವನ್ನು ಸ್ವೀಕರಿಸಿ, ರಾಜಾ ಕೌಲ್ ಹೆಂಡತಿ ಮಕ್ಕಳೊಂದಿಗೆ ರಾಜಧಾನಿಯಾದ ದಿಲ್ಲಿಗೆ ಪ್ರಯಾಣ ಬೆಳೆಸಿದರು. ದಿಲ್ಲಿಯ ಸಮೀಪದ ತೋಟದಲ್ಲಿದ್ದ ಒಂದು ಕಾಲುವೆಯ ಬಳಿ ಕೌಲರಿಗೆ ಒಂದು ಜ ದೊರೆ ಒದಗಿಸಿದ. ಕಾಲುವೆಗೆ "ನಾಹರ್" ಎಂದು ಕರೆಯುವುದೂ ಉಂಟು.

ನಾಹರ್ ಪದದಿಂದ 'ನೆಹರು" ಅಡ್ಡ ಹೆಸರು ಬಂತು ರಾಜಾ ಕೌಲ್ ನೆಹರು' ಎಂದು ಅವರನ್ನು ಜನ ಕರೆಯತೊಡಗಿದರು. ಕೊನೆಗೆ ''ಕೌಲ್" ಲೋಪ ವಾಗಿ ಬರೀ "ನೆಹರು ಅಡ್ಡ ಹೆಸರು ಉಳಿಯಿತು

## ಮೊಗಲರ ಅವನತಿ

ಮೊಗಲರ ಕೃಪಾದೃಷ್ಟಿಗೆ ಪಾತ್ರವಾಗಿದ್ದ ನೆಹರು ಮನೆತನವು ಸುಖ ಸಂಪತ್ತನ್ನು ಕಂಡಿತು. ಆದರೆ ಅವರ ಆಳಿಕೆಯು ಇಳಿಮುಖವಾದಂತೆ ನೆಹರು ಕುಟುಂಬಕ್ಕೂ ಗ್ರಹಣ ಹಿಡಿಯಿತು. ದಿನದಿಂದ ದಿನಕ್ಕೆ 'ಈಸ್ಟ್ ಇಂಡಿಯಾ ಕಂಪೆನಿ' ಪ್ರಬಲವಾಗುತ್ತ ಬಂದಿತು. ಭಾರತವು ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಭೀಕರ ಹೋರಾಟ ನಡೆಸಿದುದೇನೋ ನಿಜ ಸಿರಾಜ್ ಉದ್ದೌಲಾ, ಮೋಹನಲಾಲ್, ಹೈದರ್ ಆಲಿ, ಟಿಪ್ಪು, ಅಪ್ಪಾಸಾಹೇಬ ಬೋನ್ಸ್ಲೆ, ಬಾಜೀರಾವ್ ಪೇಶ್ವೆ, ಔಂಧದ ಬೇಗಂ, ಸರದಾರ್ ಅತ್ತರಿವಾಲಾ, ಝಾನ್ಸಿ ಲಕ್ಷ್ಮೀರಾಣಿ, ತಾಂತಿಯಾ ಟೋಪಿ, ನಾನಾಸಾಹೇಬ್ ಮೊದಲಾದವರೆಲ್ಲ ವೀರರಾಗಿ ಹೋರಾಡಿದರು. ಆದರೆ ದುರದೃಷ್ಟದಿಂದ ಅವರಿಗೆ ಯಶ ದೊರೆಯಲಿಲ್ಲ ಅಖಿಲ ಭಾರತಕ್ಕೆ ಬ್ರಿಟಿಶರಿಂದ ಗಂಡಾಂತರವಿದೆಯೆಂದು ಎಲ್ಲರೂ ಮೊದಲು ಭಾವಿಸದೆ ಹೋದರು ಐಕ್ಯದಿಂದಲೂ ಅವರು ಕಾದಲಿಲ್ಲ ಸಿಪಾಯಿ ದಂಗೆಯು ಇಂಗಿ ಹೋಗಲೂ ಅದೇ ಕಾರಣ. ಈ ದಂಗೆಯ ಪರಿಣಾಮವಾಗಿ ಮೊಗಲರು ಸಂಪೂರ್ಣ ಉರುಳಿದರು ಅವರ ಆಶ್ರಯದಲ್ಲಿದ್ದ ನೆಹರು ಮನೆತನವೂ ಜರಿದು ಬಿದ್ದಿತು.

## ದಿಲ್ಲಿಯಿಂದ ಆಗ್ರಾಕ್ಕೆ

ವಿಜಯ ಲಕ್ಷ್ಮಿ ಪಂಡಿತರ ಅಜ್ಜ, ಗಂಗಾ ದಾರ್ ನೆಹರು ದಿಲ್ಲಿಯಲ್ಲಿ ಕೊತವಾಲರಾಗಿದ್ದರು. ದಂಗೆಯಲ್ಲಿ ಸರ್ವಸ್ವವನ್ನೂ ಕಳೆದುಕೊಂಡುದುದರಿಂದ ದಿಲ್ಲಿಯಲ್ಲಿ ವಾಸಿಸುವುದೇ ಕಷ್ಟವಾಗಿ ಪರಿಣಮಿಸಿತು, ಗಂಗಾ ದಾರ್ ನೆಹರು ದಿಲ್ಲಿಯಿಂದ ಹೊರಡದೆ ಬೇರೆ ಉಪಾಯವಿರಲಿಲ್ಲ. ಆಗ ಮೋತೀಲಾಲ ನೆಹರು ಜನಿಸಿರಲಿಲ್ಲ ವಿಜಯ ಲಕ್ಷ್ಮಿಯ ಮಾವಂದಿರು ಮಾತ್ರ ವಯಸ್ಸಿಗೆ ಬಂದಿದ್ದರು ಗಂಗಾ ದಾರ್ ನೆಹರು ಅವರನ್ನೆಲ್ಲ ಕೂಡಿಕೊಂಡು ನಿರಾಶ್ರಿತರಾಗಿ ದಿಲ್ಲಿಯಿಂದ ಹೊರಬಿದ್ದರು. ಬ್ರಿಟಿಶ್ ಸೈನಿಕರು ಅವರ ಬೆನ್ನು

ಬಿಡಲಿಲ್ಲ. ದಾರಿಯಲ್ಲಿ ಈ ಸಿರಿಶ್ರೀಮಂತರನ್ನು ಅಡ್ಡಗಟ್ಟಿದರು. ವಿಜಯ ಲಕ್ಷ್ಮಿಯ ಸೋದರತ್ತೆ ಆಗ ಸಣ್ಣ ಹುಡುಗಿ. ಕೆಂಪು ಕೆಂಪಾಗಿ ಯುರೋಪಿಯನ್ ಬಾಲೆಯಂತೆ ಕಾಣುತ್ತಿದ್ದಳು ಈ ಹುಡುಗಿ ಇಂಗ್ಲೀಷ್ ಕುಟುಂಬಕ್ಕೆ ಸೇರಿರಬೇಕೆಂದು ಬ್ರಿಟಿಶ್ ಸೈನಿಕರು ಊಹಿಸಿ, ಈ ಮಗುವನ್ನು ಅಪಹರಿಸಿರಬೇಕೆಂದು ಆರೋಪಿಸಿದರು. ಅಪಾದನೆ ಹೇರಿದ ಮೇಲೆ ನ್ಯಾಯಾನ್ಯಾಯ ವಿಚಾರಣೆ ಮಾಡುವ ಕಾಲವದಲ್ಲ ಎಲ್ಲರನ್ನೂ ಮರಗಳಿಗೆ ತೂಗಿಸಿದರೂ ತೂಗಿಸಿದರೇ ಆದರೆ ಮಾವಂದಿರಿಗೆ ಹರುಕು ಮುರುಕು ಇಂಗ್ಲೀಷ್ ಬರುತ್ತಿದ್ದುದ್ದರಿಂದ ಮಾತಿನಲ್ಲೇ ಸ್ವಲ್ಪ ವೇಳೆಗಳೆಯಿತು. ಅಷ್ಟರಲ್ಲಿ ಪರಿಚಯವಿದ್ದ ಯಾರೋ ಪುಣ್ಯಾತ್ಮರು ಆ ದಾರಿಯಿಂದ ಬಂದು ಬಿಡಿಸಿದರು. ಗಂಗಾ ದಾರ್ ನೆಹರು ಆಗ್ರಾಕ್ಕೆ ಬಂದು ನೆಲೆಸಿದರು. ಅವರು ಮೊಗಲರ ವೇಷ ಭೂಷಣವನ್ನೇ ತೊಡುತ್ತಿದ್ದರು

**ಮೋತೀಲಾಲ್ ನೆಹರು**

ಮೋತೀಲಾಲರು ಜನಿಸಿದುದು ಈ ಆಗ್ರಾನಗರದಲ್ಲೇ. ೧೮೬೧ನೇ ಇಸವಿ ಮೇ ತಿಂಗಳ ಆರನೇ ತಾರೀಖಿನ ದಿನ ಅವರು ಈ ಇಳೆಗೆ ಇಳಿದು ಬಂದರು. ಆದರೆ ತಂದೆಗೆ ಈ ಮುದ್ದು ಮಗನನ್ನು ಕಾಣುವ ಭಾಗ್ಯವಿರಲಿಲ್ಲ ಮೂರು ತಿಂಗಳ ಮೊದಲೇ ಅವರು ದೈವಾಧೀನರಾಗಿದ್ದರು. ಕುಟುಂಬದ ಹೊರೆ ವಿಜಯ ಲಕ್ಷ್ಮಿಯ ಹಿರಿಯ ಮಾವ ಬನ್ಸಿದಾರ ನೆಹರುರವರ ತಲೆಯ ಮೇಲೆ ಬಿದ್ದಿತ್ತು. ಇಂಗ್ಲಿಷ್ ಅಭ್ಯಾಸ ಮಾಡಿ ಅವರು ಬ್ರಿಟಿಷ್ ಸರಕಾರದಲ್ಲಿ ನೌಕರಿ ಹಿಡಿದರು ಇನ್ನೊಬ್ಬ ಮಾವ ನಂದಲಾಲ್ ನೆಹರು ಕಾಯದೆ ಅಭ್ಯಾಸ ಮಾಡಿ ಆಗ್ರಾದಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ಮೋತೀ ಲಾಲರನ್ನು ಈ ವಕೀಲರೇ ಸಾಕಿ ಸಂರಕ್ಷಿಸಿದರು.

**ವಕೀಲಿ ವೃತ್ತಿ**

ಹನ್ನೆರಡು ವರುಷಗಳ ವರೆಗೆ ಮೋತೀ ಲಾಲರು ಅರೆಬಿಕ್ ಮತ್ತು ಪರ್ಶಿಯನ್ ಅಭ್ಯಾಸ ಮಾಡಿದರು. ಆ ಮೇಲೆ ಕಾನಪುರಕ್ಕೆ ತೆರಳಿ ಹಾಯಸ್ಕೂಲಿಗೆ ಪ್ರವೇಶಿಸಿದರು. ಹಾಯಸ್ಕೂಲ್ ಶಿಕ್ಷಣ ಮುಗಿದ ಬಳಿಕ ಕಾಲೇಜ್ ಮೋಹಿಸಿತು. ಆಗ ಅಲ್ಲಾಬಾದ್ ನಗರದಲ್ಲಿ ಕಾಲೇಜ್ ಇದ್ದುದ

ರಿಂದ ಅಲ್ಲಿಗೆ ತೆರಳಬೇಕಾಗಿ ಬಂದಿತು. ಪಂಡಿತ ಮದನ ಮೋಹನ ಮಾಲವೀಯರೂ ಮೋತಿಲಾಲರ ಸಹಪಾಠಿ. ಮೋತಿಲಾಲ್ ತುಂಟ. ಆದರೆ ಅವರ ಮೇಲೆ ಪ್ರಾಧ್ಯಾಪಕರಿಗೆಲ್ಲ ಭಾರೀಪ್ರೀತಿ. ಆಗಿನ ಅವರ ಉಡುಗೆ ತೊಡಿಗೆಗಳೆಲ್ಲ ಇಂಗ್ಲೀಷರಂತೆಯೇ ಮಾತಿನ ರೀತಿಯೂ ಅದೇ. ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಲಿಲ್ಲ. ಓದನ್ನು ಅಲ್ಲಿಗೇ ನಿಲ್ಲಿಸಿ ವಕೀಲಿ ಅಭ್ಯಾಸವನ್ನು ಆರಂಭಿಸಿದರು. ಮೂರು ತಿಂಗಳೊಳಗೆ ಪರೀಕ್ಷೆಗೆ ಕುಳಿತರು ಮೊದಲನೇ ವರ್ಗದಲ್ಲಿ ತೇರ್ಗಡೆ ಹೊಂದಿದುದರಿಂದ ಅವರಿಗೆ ಚಿನ್ನದ ಪದಕವೂ ದೊರೆಯಿತು. ಕಾನಪುರದಲ್ಲಿ ಮೂರು ವರುಷಗಳ ವರೆಗೆ "ಅಪ್ರೆಂಟಿಸ್" ಕೆಲಸ ಮಾಡಿ ಮುಂದೆ ಅಲ್ಲಾಬಾದ್ ಹಾಯಕೋರ್ಟಿನಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ಸತತೋದ್ಯೋಗ, ಅಪ್ರತಿಮ ಪ್ರತಿಭೆಗಳಿಂದ ಅವರು ಪ್ರಮುಖ ವಕೀಲರಾಗಿ ಬೆಳಕಿಗೆ ಬಂದರು. ಕೀರ್ತಿಯೊಂದಿಗೆ ಲಕ್ಷ್ಮಿಯೂ ಒಲಿದಳು.

### ದೇಶದ ಸ್ಥಿತಿಗತಿ

ಆದರೆ ದೇಶದ ಸ್ಥಿತಿಗತಿ ತೃಪ್ತಿಕರವಾಗಿರಲಿಲ್ಲ. ದಂಗೆ, ದರೋಡೆಗಳಿಲ್ಲದಿದ್ದರೂ ಬ್ರಿಟಿಶ್ ನೊಗದ ಭಾರ ದಿನದಿಂದ ದಿನಕ್ಕೆ ಹೆಚ್ಚುತ್ತಿತ್ತು. "ಭೇದನೀತಿ" ಯನ್ನು ಅವರು ಆಚರಣೆಯಲ್ಲಿ ತಂದಿದ್ದರು. ಸಿಪಾಯಿ ದಂಗೆಯ ಅಂತ್ಯದಿಂದ ಈ ಭೇದನೀತಿಯೇ ಪ್ರಬಲವಾಯಿತು. ಆಗಿನ ವಾಯಿಸರಾಯರಾಗಿದ್ದ ಲಾರ್ಡ ಕರ್ಜನರು ಸಕ್ಕರೆಯಂತಹ ಸವಿಮಾತುಗಳನ್ನಾಡುತ್ತಿದ್ದರು. ಹೀಗಿದ್ದರೂ ಜನತೆಯ ದುಃಖದುಮ್ಮಾನ ದಾರಿದ್ರ್ಯಗಳನ್ನು ಹೇಳಲಳವಲ್ಲ. ಅದನ್ನು ಕಂಡು ಅನೇಕರ ಎದೆಗರಗಿತು. ಭಾರತದ ಸಮಸ್ಯೆಗಳ ನಿವಾರಣೋಪಾಯ ಹೇಗೆಂದು ಅವರು ಚಿಂತಿಸತೊಡಗಿದರು. 'ಅಧಿಕಾರಿಗಳನ್ನು ಕಂಡು ಜನತೆಯ ಕಷ್ಟನಿಷ್ಠುರಗಳನ್ನು ತಿಳಿಸಿ, ಅವರ ಮನವೊಲಿಸುವದೊಂದೇ ದಾರಿಯೆಂದು ಕೆಲವರ ಮತ. ಮತ್ತು ಅವರಲ್ಲಿ ಅಲ್ಲನ್ ಹ್ಯೂಂ ಸಾಹೇಬರೊಬ್ಬರು. ಒಬ್ಬಿಬ್ಬರು ಭೆಟ್ಟಿಯಾಗಿ ಮಾತುಕತೆ ನಡೆಸುವದರಲ್ಲಿ ಹುರುಳಿಲ್ಲವೆಂಬೂ ಅವರ ತರ್ಕ. ಆದುದರಿಂದ ೧೮೮೫ರಲ್ಲಿ "ಹಿಂದೀ ರಾಷ್ಟ್ರೀಯ ಕಾಂಗ್ರೆಸ್"ನ್ನು ಹ್ಯೂಂ ಸಾಹೇಬರು ಸ್ಥಾಪಿಸಿದರು.

**ರಾಷ್ಟ್ರೀಯ ಕಾಂಗ್ರೆಸ್**

ಅಂದು ರಾಷ್ಟ್ರೀಯ ಕಾಂಗ್ರೆಸ್ "ಸ್ವಾಮಿ ಸೇವಕ" ಸಂಸ್ಥೆಯೇ ಆಗಿತ್ತು ಕೈ ಬೆರಳಲ್ಲಿ ಎಣಿಸುವಷ್ಟು ಮಂದಿ ಮಾತ್ರ ಅದರ ಸದಸ್ಯರು. ಶ್ರೀಮಂತರಿಗೆ ಅದರಲ್ಲಿ ಸ್ಥಾನ ಇಂಗ್ಲಿಷ್ ಬಲ್ಲವರದೇ ಆಟ. ಉದ್ದುದ್ದ ಭಾಷಣ ಮಾಡುವದೇ ಅವರ ಕೆಲಸ. ಸರಕಾರದ ವಿರುದ್ಧ "ಗುರ್" ಎಂದೆನ್ನುತ್ತಿರಲಿಲ್ಲ ಸರಕಾರದ 'ಉದಾರ" ಧೋರಣವನ್ನು ಅವರು ಪ್ರಶಂಸಿಸುತ್ತಿದ್ದರು ಹಿಂದೀಯರನ್ನು ಉಚ್ಚ ನೌಕರಿಗಳಲ್ಲಿ ನೇಮಿಸಿಕೊಳ್ಳ ಬೇಕೆಂದು ಕರಜೋಡಿಸುತ್ತಿದ್ದರು ಮೋತೀಲಾಲರು ಒಂದೆರಡು ಅಧಿವೇಶನಗಳಿಗೆ ತೆರಳಿದ್ದರು ಕಾಂಗ್ರೆಸ್ ಸದಸ್ಯರಾಗಿ ಸೇರಿದ್ದರೂ ಅದು ಹೆಸರಿಗೆ ಮಾತ್ರ. ಅದರ ಗೊತ್ತುಗುರಿಗಳೆಲ್ಲ ಅವರಿಗೆ ರುಚಿಸುತ್ತಿದ್ದಿಲ್ಲ. ಉಗ್ರ ಧೋರಣ ವಹಿಸಬೇಕೆಂದ. ಮೋತೀಲಾಲರಭಾವನೆಯಾಗಿತ್ತೋ ಇಲ್ಲವೋ ಹೇಳುವುದು ಕಠಿನ "ಜಗಳಕ್ಕೆ" ಹಿಂಜರಿಯದ ವ್ಯಕ್ತಿ. ಬಾಲ್ಯದಿಂದಲೂ "ತುಂಟ" ಎಂದು ಕರೆಸಿಕೊಂಡವರು ಆದರೆ ಅವರ ನಡೆ ನುಡಿ ಮಾತ್ರ ಆಂಗ್ಲರಂತಿದ್ದುದು ನಿಜ. ಕಾಂಗ್ರೆಸ್ಸಿಗನ ಕಡೆ ಅಲಕ್ಷದಿಂದಲೇ ಇದ್ದರು.

**ಸುಖ ಜೀವನ**

ಮೋತೀಲಾಲರಿಗೆ ಯಾವ ಕೊರತೆಯೂ ಇದ್ದಿರಲಿಲ್ಲ ಸ್ವರೂಪರಾಣಿ ಯೆಂಬ ರೂಪವಂತೆ ಹೆಣ್ಣನ್ನು ಮದುವೆಯಾಗಿದ್ದರು. ಕೈಯಲ್ಲಿ ಬೇಕಾದಷ್ಟು ಹಣವೂ ಓಡಾಡುತ್ತಿತ್ತು ೧೮೮೯ರಲ್ಲಿ ಸುಪುತ್ರ ಜವಾಹಿರಲಾಲರು ಜನಿಸಿದರು ಮೋತೀಲಾಲರ ಆನಂದಕ್ಕೆ ಪಾರವಿರಲಿಲ್ಲ ಇನ್ನಷ್ಟು ಹುಮ್ಮಸ್ಸಿನಿಂದ ಅವರು ವಕೀಲಿ ಮಾಡಲಾರಂಭಿಸಿದರು. ಗಂಗೆಯಂತೆ ಲಕ್ಷ್ಮಿ ಹರಿದು ಬಂದಳು. ಹತ್ತು ವರುಷಗಳೊಳಗೆ ಅವರು ದೊಡ್ಡ ಶ್ರೀಮಂತ ವಕೀಲರೆಂದು ಖ್ಯಾತಿವೆತ್ತಿದರು ಪ್ರಾಂತದಲ್ಲಿ ಅವರ ಹೆಸರೇ ಹೆಸರು ಅವರ ರಾಜಠೀವಿ ದೊಡ್ಡ ಮನಸ್ಸು ಔದಾರ್ಯ ಎಲ್ಲ ಕಡೆಗಳಿಗೂ ಹಬ್ಬಿತು. "ಆನಂದ ಭವನ' ವೆಂಬ ದೊಡ್ಡ ಮನೆಯನ್ನು ಮೋತಿಲಾಲರು ಕಟ್ಟಿಸಿದರು ಮನೆಯ ಕಂಪೌಂಡಿನಲ್ಲಿ ಹೂವಿನ ತೋಟ, ಈಸುವ ಕೆರೆಗಳಿದ್ದವು. ಆಳು ಕಾಳು ಕುದುರೆ ಕಾರುಗಳಿಗೂ ಕೊರತೆಯಿರಲಿಲ್ಲ ಮನೆ ಕಟ್ಟಿದ ವರುವರುಷವೇ ಜವಾಹಿರಲಾಲರಿಗೊಬ್ಬ ತಂಗಿಯೂ ಹುಟ್ಟಿ ಬಂದಳು. ಇವಳೇ ವಿಜಯ ಲಕ್ಷ್ಮಿ

## ೨. ಸ್ವರೂಪ ಕುಮಾರಿ

ಜವಾಹಿರಲಾಲರಿಗೆ ಹನ್ನೊಂದು ವರುಷವಾಗಿದೆ. ಇಷ್ಟು ವರುಷಗಳು ದಾಟಿದ್ದರೂ ಅವರಿಗೆ ತಂಗಿ ಅಥವಾ ತಮ್ಮಂದಿರಿರಲಿಲ್ಲ. ಆದರಿಂದ ಅವರಿಗೆ ಬಹಳ ಬೇಸರವಾಗಿತ್ತೆಂದು ತಮ್ಮ ಆತ್ಮಚರಿತೆಯಲ್ಲಿ ಒಪ್ಪಿಕೊಂಡಿದ್ದಾರೆ ಆಟವಾಡಲು ತಂಗಿ ತಮ್ಮಂದಿರಿಲ್ಲದಿದ್ದುದರಿಂದ ಹೊತ್ತೇ ಹೋಗುತಿದ್ದಿಲ್ಲ ಜವಾಹಿರಲಾಲರಿಗೆ, ಆನಂದ ಭವನದ ಕೆರೆಯಲ್ಲಿ ಸದಾ ಈಸಲಾರಂಭಿಸಿದರು. ಅದಕ್ಕೆ ಹೊತ್ತು ಗೊತ್ತಿರಲಿಲ್ಲ. ಮನಸ್ಸಾದಾಗಲ್ಲೆಲ್ಲ ಕೆರೆಯಲ್ಲಿ ಧುಮುಕಿ ಈಸುತ್ತಿದ್ದರು ಕೆರೆಯ ಪಾವಟಿಗೆಗಳಲ್ಲಿ ಕುಳಿತವರನ್ನು ನೀರಿಗೆ ನೂಕುತಿದ್ದರು ಮೋತೀಲಾಲರ ಮಿತ್ರರಾಗಿದ್ದ ಸರ್ ತೇಜಬಹದ್ದೂರ್ ಸಪ್ರುರವರನ್ನು ಜವಾಹಿರಲಾಲರು ನೀರಿಗೆ ನೂಕುತಿದ್ದರಂತೆ ತಂಗಿಯೋ ತಮ್ಮನೋ ಜನಿಸುವ ದಿನ ಜವಾಹಿರಲಾಲರ ಸಂತೋಷಕ್ಕೆ ಪಾರವಿರಲಿಲ್ಲ. ಮೋತೀಲಾಲರು ಆಗ ಯುರೋಪಿನಲ್ಲಿ ಸಂಚರಿಸುತಿದ್ದರು. ಶುಭ ಸಮಾಚಾರವನ್ನು ತಿಳಿವ ಕುತೂಹಲದಿಂದ ಜವಾಹಿರಲಾಲರು ಆನಂದ ಭವನದ ಹೊರ ಜಗಲಿಯಲ್ಲಿ ನಿಂತಿದ್ದರು. ಡಾಕ್ಟರರೊಬ್ಬರು ಬಂದು "ತಮ್ಮನಾಗುತ್ತಿದ್ದರೆ ಆಸ್ತಿಯಲ್ಲಿ ಪಾಲು ಕೇಳುತಿದ್ದ. ಹುಟ್ಟಿದುದು ತಂಗಿ ಮಹಾರಾಯ" ಎಂದು ವಿನೋದಕ್ಕೆಂದರು ಆದರೆ ಆಮಾತು ಜವಾಹಿರಲಾಲರ ಮನಸ್ಸನ್ನು ಬಹಳ ನೋಯಿಸಿತು. ತಮ್ಮ ಹುಟ್ಟಿದರೆ ಆಸ್ತಿಯಲ್ಲಿ ಪಾಲು ಕೇಳಬಹುದಲ್ಲ ಎಂಬ ಕೆಟ್ಟ ವಿಚಾರವೇ ಜವಾಹಿರಲಾಲರಲ್ಲಿರಲಿಲ್ಲ.

**ತಾಯಿಳಿಗೆ ಮಳೆ**

ಜವಾಹಿರಲಾಲರು ಬಂದಾಗ ಮಳೆ ಬರುತ್ತದೆಯಂತೆ. ಅವರೇ ಅದನ್ನು ಒಮ್ಮೆ ಹೇಳಿದಂತೆ ತೋರುತ್ತದೆ. ಅದರ ಸತ್ಯಾಸತ್ಯತೆಯನ್ನು ಪರಿಕಿಸುವದು ಕಠಿನ ಅವರು ಬಂದಾಗ ಪುಷ್ಪವೃಷ್ಟಿಯಾಗುತ್ತದೆ ಯೇನೋ

ನಿಜ! ಆದರೆ ವಿಜಯಲಕ್ಷ್ಮಿ ಹುಟ್ಟಿದಾಗ ಅಮಿತ ಮಳೆ ಬಂದಿತು ಜನ ಮಳೆಗಾಗಿ ಬಹಳ ಕಾತರಿಸಿದ್ದರು. ಬೇಸಿಗೆಕಾಲ ಕರಗಿ "ಮಳೆಗಾಲ" ಆರಂಭವಾಗಿದ್ದರೂ ಮಳೆಯ ಸುಳಿವಿರಲಿಲ್ಲ ಎಲ್ಲಿ ನೋಡಿದರೂ ಮಳೆಯ ಅಭಾವ ನೀರಿನ ಕೊರತೆ ಹಾಹಾಕಾರ ದೇಶದಲ್ಲಿ ಬರಗಾಲದ ಗಂಡಾಂತರ ವಿತ್ತು. ಸಿಮ್ಲಾದ ತಂಪು ಹವೆಯಲ್ಲಿ ವಿಹರಿಸುತಿದ್ದ ಲಾರ್ಡ ಕರ್ಜನ್ ಕೂಡಾ ಆ ಗುಡ್ಡದಿಂದ ಇಳಿದು ಬರಗಾಲ ಭಾಗಗಳಿಗೆ ತೆರಳಿದ ಇಂಥ ಭೀಕರ ಪರಿಸ್ಥಿತಿಯನ್ನರಿತೋ ಏನೋ ವಿಜಯಲಕ್ಷ್ಮಿ ಈ ಧರೆಗೆ ಇಳಿದು ಬಂದಾಗ ಮಳೆಯಿಂದ ಭೂಮಿ ತೊಯ್ದಿತು.

## ಸ್ವರೂಪ ಕುಮಾರಿ

ವಿಜಯಲಕ್ಷ್ಮಿ ಹುಟ್ಟಿದುದು ೧೯೦೦ರರಲ್ಲಿ. ಅಗಸ್ಟ ತಿಂಗಳ ೧೮ ನೇ ತಾರೀಖು ಅವಳ ಜನ್ಮದಿನ ಮಗು ಬಹಳ ಲಾವಣ್ಯಮಯಿ ದಿನಗಳೆದಂ ತೆಲ್ಲ ಅಂದವೇರುತ್ತಿತ್ತು. ಕಂಡು ಎತ್ತಿಕೊಂಡು ಮುದ್ದಾಡದವರಿಲ್ಲ ಈ ಮುದ್ದಿನಾ ಮುದ್ದೆ ಎಲ್ಲರ ಕಣ್ಮಣಿಯಾಗಿ ನಲಿಯಿತು ರೂಪಲಾವಣ್ಯಕ್ಕೆ ಮೆಚ್ಚಿದ ತಾಯಿ ತಂದೆ "ಸ್ವರೂಪ" ಎಂದೇ ಕರೆಯುತ್ತಿದ್ದರು. "ಸ್ವರೂಪ ಕುಮಾರಿ" ಎಂದು ಮಗುವಿನ ಮತ್ತೊಂದು ಹೆಸರು. "ವಿಜಯಲಕ್ಷ್ಮಿ" ಎಂದು ಬಂದುದು ಮತ್ತೆ ಅದೂ ತಾರ್ಕಿಕ ನಾಮವೇ ಸರಿ ಏಕೆಂದರೆ ಲಕ್ಷ್ಮಿ ಜನಿಸಿದಾಗ ಮೋತೀಲಾಲರು ಸುಖಸಂಪತ್ತಿನಲ್ಲಿದ್ದರು ವಿಲಾಸ ಜೀವನ ಅವರದಾಗಿತ್ತು. ಕುದುರೆ ಸವಾರಿಯಲ್ಲಿ ಪ್ರವೀಣರಿದ್ದುದರಿಂದ ಹಲವು ಕುದುರೆಗಳನ್ನು ತೆಗೆದುಕೊಂಡಿದ್ದರು. ಕುದುರೆಗಳು ಎಳೆಯುವ ಕೋಚುಗಳನ್ನು ಪಡೆದಿದ್ದರು ಇದಲ್ಲದೆ ಮೋಟಾರ್ ಕಾರ್ ಬೇರೆ. ಬೆಲೆಯುಳ್ಳ ಹಲವು ನಾಯಿಗಳನ್ನು ಯುರೋಪಿನಿಂದ ತಂದಿದ್ದರು ಇಂಗ್ಲಂಡಿನ ದೊಡ್ಡ ಲಾರ್ಡ ಮನೆತನದ ರೀತಿಯಿಂದ ಮೋತೀಲಾಲರು ಮೆರೆಯುತಿದ್ದರು. ವಿಜಯಲಕ್ಷ್ಮಿಗಾಗಿ ಸಣ್ಣ ಹೆಣ್ಣು ಕುದುರೆಗಳೂ ಬಂದವು

## ಯುರೋಪಿಯನ್ ಶಿಕ್ಷಕಿ

ವಿಜಯಲಕ್ಷ್ಮಿಯು ಎಳೆ ವಯಸ್ಸಿನಲ್ಲೇ ಮೋತೀಲಾಲರು ಹೆಂಡತಿ ಯೊಂದಿಗೆ ಯುರೋಪಿನಲ್ಲಿ ಸಂಚರಿಸಿದರು. ಆಗಲೇ ಹಾರೋ ವಿಶ್ವವಿದಾ

ಲಯದಲ್ಲಿ ಕಲಿಯುತಿದ್ದ ಜವಾಹಿರಲಾಲರನ್ನು ಭೆಟ್ಟಿಯಾದರು ಇಂಗ್ಲಂಡ್, ಫ್ರಾನ್ಸ್, ಜರ್ಮನಿ, ಇಟಲಿ ಮೊದಲಾದ ದೇಶಗಳಲ್ಲೂ ಅವರು ಸಂಚರಿಸಿದರು. ವಿಜಯಲಕ್ಷ್ಮಿಗೆ ವಿದ್ಯಾಭ್ಯಾಸ ಕಲಿಸಲು ಮೋತೀಲಾಲರು ಕುಮಾರಿ ಹೂಪರಳನ್ನು ನೇಮಿಸಿದುದು ಇದೇಕಾಲಕ್ಕೆ ಕುಮಾರಿ ಹೂಪರ್ ದೊಡ್ಡ ಮನೆತನದವಳು. ಪ್ರತಿಭಾನ್ವಿತ ಶಿಕ್ಷಕಿಯೆಂದೂ ಹೆಸರು ಗಳಿಸಿದ್ದಳು ಅವಳೇ ದೊರೆತುದರಿಂದ ಮೋತೀಲಾಲರಿಗೆ ಸಮಾಧಾನವಾಯಿತು.

## ಮನೆಯಲ್ಲೇ ಶಿಕ್ಷಣ

ಮನೆಯಲ್ಲೇ ಶಿಕ್ಷಣ ಕೊಡಲು ಶಿಕ್ಷಕಿಯನ್ನು ಮೋತೀಲಾಲರು ನೇಮಿಸಲು ಮತ್ತೊಂದು ಪ್ರಬಲವಾದ ಕಾರಣವಿದೆ ಸಾರ್ವಜನಿಕ ಶಾಲೆಗಳಿಗೆ ಹೆಣ್ಣುಮಕ್ಕಳನ್ನು ಕಳಿಸಲು ಅವರಿಗೆ ಇಚ್ಛೆಯಿದ್ದಿರಲಿಲ್ಲ ಆಗಿನ ಕಾಲದ ಶ್ರೀಮಂತ ಜನರ ಭಾವನೆಯೇ ಮೋತೀಲಾಲರಲ್ಲಿತ್ತು. ಹೆಣ್ಣುಮಕ್ಕಳಿಗೆ ಶಾಲೆ ಕಾಲೇಜುಗಳಲ್ಲಿ ಶಿಕ್ಷಣವೇಕೆ? ಪರೀಕ್ಷೆ ಪಾಸಾಗಿ ನೌಕರಿ ಮಾಡಬೇಕೇನು? ಎಂಬ ವಿಚಾರ ಅವರದು. ವಯಸ್ಸಿಗೆ ಬಂದೊಡನೆಯೇ ಹೆಣ್ಣು ಮದುವೆಯಾಗಿ ಗಂಡನ ಮನೆಗೆ ತೆರಳುವದು ತಪ್ಪಿದ್ದಲ್ಲ ಯಾವುದಾದರೂ ಶ್ರೀಮಂತರ ಮನೆಗೂ ವಿಜಯಲಕ್ಷ್ಮಿ ತೆರಳುವುದು ನಿಶ್ಚಯ. ಶ್ರೀಮಂತರಿಗೆ ಸರಿಹೋಗುವಂತೆ ನಡೆ ನುಡಿ ಬೇಕು ಓದುಬರಹ, ಸಂಗೀತ ಗೃಹಕೃತ್ಯ ಗೊತ್ತಿದ್ದರೆ ಸಾಕು ಆದುದರಿಂದ ಮನೆಯಲ್ಲೇ ಶಿಕ್ಷಣ ಕೊಡಿಸಲು ಮೋತೀಲಾಲರು ನಿರ್ಧರಿಸಿದ್ದರು.

## ವಿಜಯಲಕ್ಷ್ಮಿಯ ಶಿಕ್ಷಣ

ಮುಂಜಾನೆ ವಿಜಯಲಕ್ಷ್ಮಿ ಕುದುರೆಯ ಮೇಲೆ ಸವಾರಿ ಮಾಡಬೇಕಾಗಿತ್ತು. ಮಗಳಿಗಾಗಿ ಅಚ್ಚಬಿಳಿ, ಉದ್ದ ಪುಚ್ಛದ ಕುದುರೆಯನ್ನು ಮೋತೀಲಾಲರು ಕೊಂಡುಕೊಂಡಿದ್ದರು. ಆನಂದ ಭವನದ ಕಂಪೌಂಡಿನಲ್ಲಿ, ಕುದುರೆ ಜೂಜಾಟದ ಕಣಗಳಲ್ಲಿರುವಂತೆ ವೃತ್ತಾಕಾರವಾಗಿ ಬಿದಿರುಗಳನ್ನು ನೆಟ್ಟಿಸಿದ್ದರು ಅದರಿಂದ ಕುದುರೆ ಅತ್ತಿತ್ತ ತೆರಳದೆ ಆ ವೃತ್ತದಲ್ಲೇ ಗಾಂಭೀರ್ಯದಿಂದ ನಡೆಯುತ್ತಿತ್ತು. ಕುದುರೆ ಸವಾರಿ ಮುಗಿದ ಮೇಲೆ ಅಭ್ಯಾಸಕ್ಕೆ ಆರಂಭ ಒದೊಂದು ವಿಷಯವನ್ನು ಕಲಿಸಲು ಒಬ್ಬೊಬ್ಬ ಮಾಸ್ತರ್. ಎಲ್ಲ

ಕ್ರಮವಾಗಿ ಸಾಗುತ್ತಿತ್ತು. ಬೇಸಿಗೆಯನ್ನು ಕಳೆಯಲು ನೆಹರೂಲಾಲರು ಕುಟುಂಬ ಪರಿವಾರ ಸಮೇತರಾಗಿ ತಂಪಾದ ಗುಡ್ಡಗಳಿಗೆ ತೆರಳುತಿದ್ದರು. ಗಂಟೆಯ ಮುಳ್ಳಿನಂತೆ ವಿಜಯಲಕ್ಷ್ಮಿಯ ಜೀವನವೂ ಕ್ರಮಬದ್ಧ.

**ನಡೆ ನುಡಿಗಳ ಗೆರೆ**

ವಿಜಯಲಕ್ಷ್ಮಿಗೆ ಯೋಗ್ಯ ನಡೆನುಡಿಗಳನ್ನು ಕಲಿಸುವ ಪ್ರಯತ್ನದಲ್ಲಿ ಯಾವುದು ಉಚಿತ? ಯಾವುದು ಅನುಚಿತವೆಂಬದನ್ನು ವಿಧಿಸಲಾಗಿತ್ತು. ಏನು ಬೇಕು, ಏನು ಬೇಡ ವೆಂಬ ಗೆರೆಗುರುತುಗಳನ್ನು ಬರೆಯಲಾಗಿತ್ತು. ಸರ್ವ ಸಾಧಾರಣವಾಗಿ ನೆಹರು ಮನೆತನದ ಎಲ್ಲ ಸದಸ್ಯರೂ ಅವುಗಳನ್ನು ಸ್ಮರಣೆಯಲ್ಲಿಟ್ಟು ಕೊಳ್ಳಬೇಕಾಗಿತ್ತು. "ನೀನಿನ್ನೂ ಚಿಕ್ಕವಳು ನಿನಗೆ ಏನೂ ಬುದ್ಧಿ ಇಲ್ಲ" ಎಂದು ಗದರಿಸುವಂತಿರಲಿಲ್ಲ. "ತಂದೆ ಮನೆಗೆ ಬಂದ ಮೇಲೆ ನಿನ್ನ ಬೆನ್ನು ಮೂಳೆ ಮುರಿಯುತ್ತದೆ, ನೋಡು" ಎಂದು ಬೆದರಿಕೆ ಹಾಕುವಂತಿರಲಿಲ್ಲ. ನೆರೆಹೊರೆಯವರ ಮುಂದೆ ಅಥವಾ ಪರರ ಇದಿರು ಹುಡುಗಿಯನ್ನು ಗದರಿಸ ಕೂಡದು ಸುಳ್ಳುವಚನ ಕೊಡುವುದಕ್ಕೆ ಬಿಡು ತ್ತಿರಲಿಲ್ಲ. ಅತಿಪ್ರಶಂಸೆಯೂ ನಿಂದನೀಯ. ಮಗು ಪಾಠ ಹೇಳುತ್ತಿರುವಾಗ ರೇಡಿಯೋ ಯಾರೂ ಹಚ್ಚಕೂಡದೆಂದು ಶಿಕ್ಷಕಿ ವಿಧಿಸಿದ್ದಳು. ಅಥವಾ ಮನೆ ಮ್ಹಾಡು ಬೀಳುವಂತೆ ಗಟ್ಟಿಯಾಗಿ ಒದರ ಬಾರದೆಂದು ನಿಯಮಿಸಿದ್ದಳು ಮಗುವಿಗೆ "ತಮಾಷೆ" ಮಾಡುವಂತಿರಲಿಲ್ಲ. ಮಗುವಿನ ಬಟ್ಟೆಬರೆಗಳನ್ನು ಅದೇ ಆರಿಸಿಕೊಳ್ಳಲು ಪ್ರೋತ್ಸಾಹ ಕೊಡುತ್ತಿದ್ದರು. "ಮನೆಯಲ್ಲೇ ಸದಾ ಕಾಲ ಮಕ್ಕಳನ್ನು ಇರಗೊಳಿಸಬೇಡಿ. ಹಿರಿಯರು ಹೊರಗೆ ತೆರಳಿದಾಗಲೆಲ್ಲ ಮಗುವನ್ನು ಕರೆದೊಯ್ಯ ಬೇಡಿ" ಎಂದೆನುತಿದ್ದಳು. "ಮಗುವಿನ ಮಾತು ಅಸಂಬದ್ಧವೆಂದು ತಿರಸ್ಕರಿಸಬಾರದು. ಒರಟು ಅಥವಾ ಕೆಟ್ಟಮಾತುಗಳನ್ನು ಆಡಕೂಡದು. ಅದರ ಮೇಲೆ ಅಧಿಕಾರ ಚಲಾಯಿಸಬಾರದು" ಎಂದು ಮುಂತಾದ ಬೇಕು ಬೇಡಗಳನ್ನು ತಿಳಿಸಲಾಗಿತ್ತು. ಕಠೋರ ಆದರೂ ಬಹಳ ಉಚಿತವಾದ ಶಿಕ್ಷಕಿಯ ಈ ನಿಯಮಗಳನ್ನು ಪಾಲಿಸಲು ನೆಹರು ಮನೆತನದ ಎಲ್ಲ ಸದಸ್ಯರೂ ಎಚ್ಚರದಿಂದಿರುತ್ತಿದ್ದರು.

**ತಂಗಿ ಕೃಷ್ಣಾ**

ವಿಜಯಲಕ್ಷ್ಮಿ ಹುಟ್ಟಿ ಏಳು ವರುಷಗಳಾದ ಮೇಲೆ ತಂಗಿ ಕೃಷ್ಣಾ ಬಂದಳು. ಇದರ ಮಧ್ಯೆ ಒಂದು ಗಂಡು ಕೂಸನ್ನು ಸ್ವರೂಪ ರಾಣಿ ನೆಹರು ಪಡೆದಿದ್ದರಂತೆ. ಆದರೆ ಅದು ಉಳಿಯಲಿಲ್ಲ. ಅದರಿಂದ ಸ್ವರೂಪರಾಣಿ ಬಹಳ ದುಃಖಿತರಾದರು. ಕೃಷ್ಣಾ ಜನಿಸಿದಾಗ "ಇದು ಗಂಡಾಗಲಿಲ್ಲವಲ್ಲ" ಎಂದು ಹಲುಬಿದರಂತೆ. ಆದರೆ ಮೋತೀಲಾಲರು ಹೆಣ್ಣು ಹುಟ್ಟಿತೆಂದು ಅಸಮಾಧಾನ ತಾಳಿರಲಿಲ್ಲ. ಅವರಿಗೆ ಸಂತೋಷವೇ. ಮಗು ಜನಿಸಿದ ಮೇಲೆ ಎಲ್ಲರಿಗೂ ಆನಂದ· ಆದರೆ ಪ್ರಸವವಾಗುವ ವರೆಗಿನ ಕಷ್ಟ ತಾಯಿಗೆ ಗೊತ್ತು. ಕೃಷ್ಣಾ ಹುಟ್ಟಿದಾಗ ಸ್ವರೂಪರಾಣಿ ನೆಹರು ಬಹಳ ನೋವನ್ನು ಅನುಭವಿಸಿದರು. ಎಲ್ಲರೂ ಚಿಂತಾಕ್ರಾಂತರಾಗಿದ್ದರು. ಮಗು ಹುಟ್ಟಿದ ಅನೇಕ ವಾರಗಳ ವರೆಗೆ ತಾಯಿ ಹಾಸಿಗೆ ಬಿಟ್ಟು ಕದಲಲಿಲ್ಲ. ಬದುಕುವರೋ ಇಲ್ಲವೋ ಎಂಬ ಸಂದೇಹವೂ ಉಂಟಾಗಿತ್ತು. ಆದುದರಿಂದ ದಾದಿಯರ ಕೈಯಲ್ಲೇ ಕೃಷ್ಣಾ ಬೆಳೆಯ ಬೇಕಾಯಿತು.

**ಅಕ್ಕ-ತಂಗಿ**

ಆ ವೇಳೆ ಶಿಕ್ಷಕಿಯು ಪಾಲಾದಳು. ಅಕ್ಕ ಮತ್ತು ತಂಗಿ ಶಿಕ್ಷಕಿಯ ಅಧೀನರಾದರು ಮೋತೀಲಾಲರು ಮಾತ್ರ ಕಡೆಗಣಿಸಲಿಲ್ಲ ಏಸಂಪ್ರತಿ ಇಷ್ಟರೊಡನೆಯೂ ಕೆಲವು ನಿಮಿಷಗಳ ವರೆಗೆ ಮಾತನಾಡದೆ ಬಿಡುತ್ತಿರಲಿಲ್ಲ ಮನೆಗೆ ಬಂದು ಹೋಗುವ ಬಂಧುಗಳಿಗೂ ಕಡಿಮೆಯಿದ್ದಿಲ್ಲ. ಬಂದ ಬಂಧುಗಳು ದೀರ್ಘಕಾಲದ ವರೆಗೆ ನೆಲೆಸುತ್ತಿದ್ದರು. ಅವರೊಡನೆ ಕೂಡಾ ಆಟವಾಡಲು ಮಕ್ಕಳಿಗೆ ಅವಕಾಶ ಕೊಡಲಾಗಿತ್ತು. ಆದರೆ ಹೆಚ್ಚಿನ ವೇಳೆ ಶಿಕ್ಷಕಿಯ ಕಟ್ಟು ನಿಟ್ಟಿನ ವ್ಯವಸ್ಥೆಯಲ್ಲೇ ಕಳೆಯುತ್ತಿತ್ತು ಆದರೆ ಕೃಷ್ಣಳಿಗೆ ಇದು ರುಚಿಸುತ್ತಿರಲಿಲ್ಲ. ಅವಳಿಗೆ ಸ್ವಲ್ಪ ಮುಂಗೋಪ. ಅದು ಒಂದು ಕ್ಷಣ ಮಾತ್ರ. ಮತ್ತೊಂದು ಕ್ಷಣಕ್ಕಿಲ್ಲ ಆದರೆ ಅದರ ಕಾರಣದಿಂದ ಕೃಷ್ಣಾ ಶಿಕ್ಷೆಯನ್ನು ಅನುಭವಿಸಬೇಕಾಗಿತ್ತು. ಒಮ್ಮೊಮ್ಮೆ ರಾತ್ರಿ ಉಪವಾಸದ ಶಿಕ್ಷೆ ಇನ್ನೊಮ್ಮೆ ಅವಳನ್ನು ಕೋಣೆಯಲ್ಲಿ ಹಾಕಿ ಕದವಿಕ್ಕುತಿದ್ದರು ಶಿಕ್ಷಕಿಯ ಮಾತು ಮೀರುತ್ತಿದ್ದುದರಿಂದ ಈ ವಿಧದ ಶಿಕ್ಷೆ. ಆದರೆ ವಿಜಯ

ಲಕ್ಷ್ಮಿ ವಿಧೇಯಳಾಗಿದ್ದುದರಿಂದ ಪಾರಾಗುತಿದ್ದಳು. ಅದೇನಿದ್ದರೂ ಇಬ್ಬರೂ, ಕುಮಾರಿ ಹೂಪರಳ ನಿಯಮಗಳಿಗನುಸಾರವಾಗಿ ನಡೆಯದೆ ಗತ್ಯಂತರವಿರಲಿಲ್ಲ. ಅರುಣೋದಯವಾದ ಮೊದಲ್ಗೊಂಡು ರಾತ್ರಿ ಹಾಸಿಗೆ ಕಾಣುವ ವರೆಗೆ ಕುದುರೆ ಸವಾರಿ, ಪಾಠ, ಊಟ, ವಿಶ್ರಾಂತಿ, ಸಂಗೀತ, ಮತ್ತೆ ಕುದುರೆ ಸವಾರಿ ಕ್ರಮ ಕ್ರಮವಾಗಿ ನಡೆಯುತ್ತಿತ್ತು. ಇದರಿಂದ ಅಕ್ಕ ಮತ್ತು ತಂಗಿಗೆ ಸ್ವಲ್ಪ ಬೇಸರ ಬರುತ್ತಿತ್ತೇನೋ ನಿಜ ಅದನ್ನು ಕಳೆಯಲು ನರ್ತನ ಕಲಿಯಬೇಕೆಂದು ವಿಜಯಲಕ್ಷ್ಮಿಗೆ ಬಹಳ ಆಶೆಯಾಯಿತು ಆದರೆ ಅದು ಮನೆತನದ ಗೌರವಕ್ಕೆ ಹೇಳಿದುದಲ್ಲವೆಂದು ಚಿವುಟಿಬಿಟ್ಟರು. ಸಿನಿಮಾಕ್ಕೆ ತೆರಳಲು ಬಯಸಿದರೆ ಅದಕ್ಕೂ ಅನುಮತಿ ಸಿಗಲಿಲ್ಲ. ಎಲ್ಲಾದರೂ ಅಮವಾಸೆಗೊಮ್ಮೆ ಹುಣ್ಣಿಮೆಗೊಮ್ಮೆ ಸರ್ಕಸ್ ಅಥವಾ ಸಂತೆಗಳಿಗೆ ಕರೆದೊಯ್ಯುತ್ತಿದ್ದರು. ಉಳಿದ ವೇಳೆ ಹೊತ್ತುಗಳೆಯಲು ತೋಟದಲ್ಲಿ ಅತ್ತಿಂದಿತ್ತ ಹಾರಾಡುವುದೊಂದೇ ಗೊತ್ತು. ಮನೆಗೆ ಯಾತ್ರಿಕರಂತೆ ಬರುತಿದ್ದ ಜನರ ಮುಂದೆ ಕೂಡಾ ಅವರು ಬಹಳ ಹಾರಾಡುವ ಹಾಗಿರಲಿಲ್ಲ. ವಿಶೇಷ ಮಾತನಾಡಕೂಡದೆಂದು ಹೂಪರ್ ತಡೆಯುತಿದ್ದಳು

## ಶ್ರೇಷ್ಠ ಶಿಕ್ಷಕಿ

ಶಿಕ್ಷಕಿ ಹೂಪರ್ ಕಠೋರಳಲ್ಲ ಒರಟು ಸ್ವಭಾವದವಳೆಂದು ತಿಳಿದರೂ ಅದು ತಪ್ಪು. ಅವಳು ಇಂಗ್ಲಂಡಿನ ದೊಡ್ಡ ಮನೆತನದವಳು. ಹಳೇ ಪದ್ಧತಿಯಲ್ಲಿ ಬೆಳೆದು ಬಂದವಳು ಇಂಗ್ಲಂಡಿನಲ್ಲಿ ಶ್ರೀಮಂತರ ಮಕ್ಕಳಿಗೆ ಕಟ್ಟು ನಿಟ್ಟುಗಳು ಬಹಳ ವಿಧೇಯತೆ, ಶಿಸ್ತು, ಸಂಯಮಗಳಿಗೆ ಪ್ರಾಧಾನ್ಯ ಕೊಡುತಿದ್ದರು. ಅದೇ ಸದ್ಗುಣಗಳು ಈ ಮಕ್ಕಳಲ್ಲೂ ಬೆಳೆದು ಬರಬೇಕೆಂದು ಅವಳ ಆಶೆ. ವಿಜಯಲಕ್ಷ್ಮಿ ಈ ನಿಯಮಗಳನ್ನು ಪಾಲಿಸುತ್ತ ಬಂದಳು. ಮುಂದೆ ಅವಳ ಜೀವನದಲ್ಲಿ ಅದು ಮಹದುಪಕಾರವನ್ನುಂಟು ಮಾಡದೇ ಇರಲಿಲ್ಲ ಮಾಂಗೋಪಡೀದ ಶಿಸ್ತು ಪಾಲಿಸಲು ತಪ್ಪಿದ ಕೃಷ್ಣಾ ಅಷ್ಟು ಕರ್ತೃತ್ವ ಶಾಲಿಯಾಗಲಿಲ್ಲ.

# ೩. ಕಾಂಗ್ರೆಸ್ ದೀಕ್ಷೆ

ಮೊದಲನೇ ಮಹಾಯುದ್ಧ ಆರಂಭವಾದುದು ೧೯೧೪ನೇ ಜುಲಾಯಿ ತಿಂಗಳಲ್ಲಿ. ಜರ್ಮನ್ ಸೈನಿಕರು ವೇಗವಾಗಿ ನುಗ್ಗಿ ಪ್ಯಾರಿಸ್ ಮಹಾನಗರದ ಹೆಬ್ಬಾಗಿಲನ್ನು ತಟ್ಟತೊಡಗಿದರು. ಲಂಡನಿಗೂ ಭಯ. ಜರ್ಮನರನು ತಡೆಯಲು ಹಿಂದೀ ಸೈನಿಕರನ್ನು ಬ್ರಿಟಿಶರು ಕಳಿಸಿದರು. ಯುದ್ಧದಲ್ಲಿ ಹಿಂದೀಯರ ಸ್ನೇಹ, ಸಹಕಾರ, ಬೆಂಬಲವನ್ನೂ ಪಡೆಯಲು ಅವರ ಪ್ರಯತ್ನ ಕಾಂಗ್ರೆಸ್, ಲೀಗ್ ಮೊದಲಾದ ಪಕ್ಷಗಳೆಲ್ಲ ಸಹಾಯದ ಮಾತನ್ನೇ ಆಡತೊಡಗಿದವು. ಈ ವಿಷಯಗಳಲ್ಲಿ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್‌ಗಳ ಧೋರಣ ಸ್ವಲ್ಪ ಮಟ್ಟಿಗೆ ಏಕವಾಗಿತ್ತು. ಆದರಿಂದ ಕಾಂಗ್ರೆಸ್ ಲೀಗ್ ಸ್ನೇಹ ವಾತಾವರಣವುಂಟಾಗಿತ್ತು.

### ಮುಂಬಯಿ ಅಧಿವೇಶನ

ಕಾಂಗ್ರೆಸ್-ಲೀಗ್ ಸ್ನೇಹ ವಾತಾವರಣದಲ್ಲೇ ಎರಡೂ ಪಕ್ಷಗಳ ವಾರ್ಷಿಕ ಮಹಾಧಿವೇಶನಗಳು ಮುಂಬಯಿಯಲ್ಲಿ ಕೂಡಿದವು. ೧೯೧೫ನೇ ಇಸವಿಯಲ್ಲಿ ಒಂದೇ ವಾರದಲ್ಲಿ ಈ ಮಹಾಸಭೆಗಳು ಜರುಗಿದವು. ಶ್ರೀಗಳಾದ ಎಸ್. ಪಿ. ಸಿಂಹ, ವಾಚಾ, ಸುರೇಂದ್ರನಾಥ, ಬ್ಯಾನರ್ಜಿ, ಅನ್ನಿಬೆಸೆಂಟ್, ಸರೋಜಿನಿದೇವಿ, ಮದನ ಮೋಹನ ಮಾಲವೀಯ, ಬಿ. ಜಿ. ಹಾರ್ನಿಮನ್, ಮಹಾತ್ಮಾ ಗಾಂಧಿ, ಮೋತೀಲಾಲ್ ಮೊದಲಾದ ಕಾಂಗ್ರೆಸ್ ಮುಖಂಡರು ಲೀಗ್ ಆಮಂತ್ರಣವನ್ನು ಸ್ವೀಕರಿಸಿ, ಲೀಗ್ ಅಧಿವೇಶನಕ್ಕೆ ಅತಿಥಿಗಳಾಗಿ ತೆರಳಿ ಭಾಗವಹಿಸಿದ್ದರು. ಮೋತೀಲಾಲರು ತೆರಳಿದಾಗ ವಿಜಯಲಕ್ಷ್ಮಿಯನ್ನು ಕರೆದೊಯ್ದಿದ್ದರು. ಲೀಗ್ ಮುಖಂಡರು ಕಾಂಗ್ರೆಸ್ ಮಹಾಧಿವೇಶನದಲ್ಲಿ ಅತಿಥಿಗಳಾಗಿ ಬಂದು ಕೂತಿದ್ದರು. ಕಾಂಗ್ರೆಸ್ ಮತ್ತು ಲೀಗ್‌ಗಳ ಮಧುರ ಮಿಲನದ ಮಾತುಕತೆ ಕೂಡಾ ನಡೆದಿತ್ತು. "ಸ್ವರಾಜ್ಯವೇ

ಎರಡೂ ಪಕ್ಷಗಳ ಗೊತ್ತು ಗುರಿಯಾಗಿದೆ" ಎಂದು ಜಿನ್ನಾರೂ ಅಂದಿನ ಲೀಗ್ ಸಭೆಯಲ್ಲಿ ನುಡಿದಿದ್ದರು. ಕಾಂಗ್ರೆಸ್ ಮಹಾಧಿವೇಶನದ ಅಧ್ಯಕ್ಷರಾದ ಲಾರ್ಡ ಸಿಂಹರವರು ಬಂಗಾಲಿ. ಲೀಗ್ ಮಹಾಧಿವೇಶನದ ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದ ಮೌಲಾನಾಮಝರುಲ್ ಹಕ್‌ರವರು ಬಿಹಾರಿ. ಇಬ್ಬರೂ ಮುಂಬಯಿಗೆ ಒಂದೇ ರೇಲ್ವೆ ಡಬ್ಬಿಯಲ್ಲಿ ಪ್ರಯಾಣ ಮಾಡಿದ್ದರು. ಇಬ್ಬರೂ ತಂತಮ್ಮ ಭಾಷಣವನ್ನು ಹಂಚಿಕೊಂಡಿದ್ದರು ಇಬ್ಬರ ಭಾಷಣಗಳಲ್ಲೂ ಕಾಂಗ್ರೆಸ್ ಲೀಗ್ ಐಕ್ಯ, ಸ್ನೇಹಗಳ ಮಾತುಗಳೇ ಇದ್ದವು. "ಪ್ರಾಯಶಃ ಮೌಲಾನಾರ ಭಾಷಣವನ್ನು ಸಿಂಹರೂ, ಸಿಂಹರ ಭಾಷಣವನ್ನು ಮೌಲಾನಾರೂ ಸಭೆಯಲ್ಲಿ ಓದಿರಬೇಕು ಎಂದು ಮೌಲಾನಾ ಮಹಮ್ಮದ್ ಅಲಿ ವಿನೋದ ಪೂರ್ಣವಾಗಿ ಅಂದಿದ್ದರು. ಕಾಂಗ್ರೆಸ್ ಲೀಗಿನ ಐಕ್ಯದ ವಾತಾವರಣ ಅಷ್ಟು ನಿಕಟವಾಗಿತ್ತು ಆಗ. ಆದರೆ ಎರಡೂ ಪಕ್ಷಗಳಲ್ಲಿದ್ದ ಒಳ ಪಂಗಡಗಳು ಒಂದೊಂದು ಕಡೆ ಎಳೆಯುತಿದ್ದವು. ಆಗಲೇ ಕಾಂಗ್ರೆಸ್ಸಿನಲ್ಲಿ ಮಂದಗಾಮಿಗಳೂ, ಉಗ್ರವಾದಿಗಳೂ, ಇದ್ದರು. ಈ ತಂಡಗಳೊಳಗೆ ಮಧುರ ಬಾಂಧವ್ಯವನುಂಟುಮಾಡಲು ಅನ್ನಿ ಬೆಸೆಂಟ್ ಮತ್ತು ಗಾಂಧೀಜಿ ಯತ್ನಿಸುತ್ತಿದ್ದರು. ಅವರ ಪ್ರಯತ್ನಕ್ಕೆ ಸ್ವಲ್ಪ ಯಶವೂ ದೊರೆಯಿತು. ಆದರೆ ಲೀಗ್ ಪಕ್ಷದಲ್ಲಿ ಮಾತ್ರ ಒಡಕು ಎದ್ದು ಕಾಣುತ್ತಿತ್ತು ಮುಸ್ಲಿಂ ಧುರೀಣರು ಕಡು ವಿರೋಧ ವ್ಯಕ್ತ ಪಡಿಸುತಿದ್ದರು ಹೀಗಾಗಿ ಐಕ್ಯದ ಮಾತು ಫಲಿಸಲಿಲ್ಲ.

**ಹೂಪರಳ ಮದುವೆ**

ಮಹಾಯುದ್ಧದ ಜ್ವಾಲೆ "ಆನಂದ ಭವನ"ದ ಬಳಿ ಸುಳಿದಿರಲಿಲ್ಲ. ನೆಹರು ಮಕ್ಕಳು ಮನೆ ಸುಖ ಸಂತೋಷದಲ್ಲಿ ಕಾಲ ಕಳೆಯುತಿದ್ದರು. ಕೇಂಬ್ರಿಜ್‌ನಿಂದ ಮರಳಿದ್ದ ಜವಾಹಿರಲಾಲರು ಆನಂದ ಭವನದ ಸುಖವನ್ನು ಹೆಚ್ಚಿಸಿದ್ದರು. ವಿಜಯಲಕ್ಷ್ಮಿಗೆ ಅಣ್ಣನೆಂದರೆ ಆಗಲೇ ಜೀವ. ಕೃಷ್ಣಾ ಮಾತ್ರ ಅಷ್ಟು ಹಚ್ಚಿಕೊಳ್ಳುತಿದ್ದಿಲ್ಲ. ಸ್ವರೂಪರಾಣಿ ನೆಹರು "ಕ್ಲಬ್"ಗೆ ತೆರಳ ಸೈನಿಕರಿಗಾಗಿ ಬಟ್ಟೆಬರೆ ಹೊಲಿಯುತಿದ್ದರು. ಸದಾ ರೇಡಿಯೋ ಕೇಳುವದು ಮೋತೀಲಾಲರ ರೂಢಿ. ಯುದ್ಧದ ಸುದ್ದಿ ಕೇಳ

ಅವರು ಚಿಂತಾತುರರಾಗಿದ್ದರು. ಆದರೆ ಅದಕ್ಕಿಂತಲೂ ಹೆಚ್ಚು ಚಿಂತೆಗೆ ಅವಕಾಶ ಕೊಡುವ ಮತ್ತೊಂದು ಘಟನೆ ನಡೆಯಿತು. ಶಿಕ್ಷಕಿ ಹೂಪರಳು ಮದುವೆಯಾಗಲು ನಿರ್ಧರಿಸಿದ್ದುದರಿಂದ ಅವಳನ್ನು ಬೀಳ್ಕೊಡಬೇಕಾಗಿ ಬಂದಿತ್ತು. ನೆಹರೂ ಮನೆತನದಲ್ಲಿ ಹನ್ನೆರಡು ವರುಷಗಳ ವರೆಗೆ ಶಿಕ್ಷಕಿಯಾಗಿದ್ದ ಹೂಪರಳು ಇಂಗ್ಲೀಷ್ ಮಿತ್ರನೊಬ್ಬನನ್ನು ಮೋಹಿಸಿದಳು. ಬೇಗನೇ ಮದುವೆಯಾಗಲು ಅವಳ ಆತುರ. ಅವಳ ಬಂಧು ಬಳಗದವರೆಲ್ಲ ಇಂಗ್ಲಂಡಿನಲ್ಲಿದ್ದರು. ಆದುದರಿಂದ ಮೋತೀಲಾಲರೇ ತಂದೆಯ ಪಾತ್ರ ವಹಿಸಬೇಕಾಗಿತ್ತು. ವಿಜೃಂಭಣೆಯಿಂದಲೇ ಮೋತೀಲಾಲರು ಅವಳ ಲಗ್ನ ಮಾಡಿಸಿ ಕೊಟ್ಟರು. ಅವಳ ಅಗಲಿಕೆಯಿಂದ ವಿಜಲಯಕ್ಷ್ಮಿ ಮತ್ತು ಕೃಷ್ಣಾ ಬಹಳ ಪೇಚಾಡಿದರು. ಈಗ ಅಕ್ಕ ಮತ್ತು ತಂಗಿಗೆ ಹೆಚ್ಚು ಸ್ವಾತಂತ್ರ್ಯ ದೊರೆಯಿತು. ವಿಜಯಲಕ್ಷ್ಮಿಗೆ ಹದಿನೇಳು ತುಂಬಿತ್ತು. ನಡೆ ನುಡಿಯಲ್ಲಿ ಅವಳು ಗಂಭೀರ ಅವಳ ಗುಣವೂ ಸ್ವಲ್ಪ ಮಟ್ಟಿಗೆ ತಾಯಿಯಂತೆ. ಸಮಾಧಾನಿ. ದುಡುಕುವ ಸ್ವಭಾವದವಳಲ್ಲ. ಹೂಪರಳ ಶಿಸ್ತಿನ ಯಂತ್ರದಲ್ಲಿ ನುರಿತವಳು. ಆದರ ಎಳೆ ವಯಸ್ಸಿನ ಕೃಷ್ಣಾ ಸ್ವಲ್ಪ ಅಣ್ಣನಂತೆ ಅಥವಾ ತಂದೆಯಂತೆ ಎಂದರೂ ಸರಿಯೇ. ಶಾಲೆಗೆ ತೆರಳ ಬೇಕೆಂದು ಅವಳ ಹಠ ತಂದೆ ಬೇಡವೆಂದರೂ ಕೇಳಲಾರಳು ಹೂಪರಳು ಲಗ್ನವಾಗಿ ತೆರಳಿದುದರಿಂದ ಮೋತೀಲಾಲರು ನಿರುಪಾಯವಾಗಿ ಒಪ್ಪಿದರು ಬಿಡುವಿನ ವೇಳೆ ಅಕ್ಕ ತಂಗಿ ಆನಂದ ಭವನದ ತೋಟದಲ್ಲಿ ವಿಹರಿಸುತಿದ್ದರು. ಇಬ್ಬರಿಗೂ ಕವಿತಾ ಕಾಮಿನಿಯ ಮೇಲೆ ಮೋಹ, ವಿಜಯಲಕ್ಷ್ಮಿ ಗಟ್ಟಿಯಾಗಿ ಓದುತಿದ್ದಳು. ಅರ್ಥವಾದರೂ ಆಗದಿದ್ದರೂ ಕಿವಿಗೊಟ್ಟು ಕೇಳುತಿದ್ದಳು ಕೃಷ್ಣಾ. ಅಕ್ಕರೆಯಿಂದ ಇಬ್ಬರೂ ಬಾಳಬದುಕಿದಾಗ ಅವರ ಗೆಳತಿಯಾಗಿ ಮೂರನೇ ಹುಡುಗಿ ಕಮಲಾ ಬಂದಳು.

ಕಮಲಾ

"೧೯೧೬ನೇ ವರುಷ ದಿಲ್ಲಿಯಲ್ಲಿ ನನ್ನ ಮದುವೆ ನೆರವೇರಿತು. ವಸಂತ ಪಂಚಮಿಯ ಶುಭ ದಿನ" ಎಂದು ಜವಾಹಿರಲಾಲರು ತಮ್ಮ ಆತ್ಮ ಚರಿತೆಯಲ್ಲಿ ಬರೆದಿರುವರು ಮದುವೆಯ ಬಗ್ಗೆ ಅವರು ಹೆಚ್ಚಿನ ವಿವರ

ಗಳನ್ನೇ ಕೊಟ್ಟಿಲ್ಲ ಗಾಂಧೀಜಿ ಕೂಡಾ ತಮ್ಮ ವಿವಾಹದ ಕುರಿತು ಅನೇಕ ವಿವರಗಳನ್ನು ಕೊಟ್ಟಿದ್ದಾರೆ. ನೆಹರು ಆ ವಿಷಯದಲ್ಲಿ ಮೌನ. ಕೃಷ್ಣಾ ಬರೆದ "ವಿತ್ ನೊ ರಿಗ್ರೆಟ್ಸ್" ಎಂಬ ಗ್ರಂಥದಲ್ಲಿ ಸ್ವಲ್ಪ ಬಣ್ಣಿಸಿದ್ದಾಳೆ. ಮೋತೀಲಾಲರಿಗೆ ಒಬ್ಬನೇ ಮಗ. ಮಗನೂ ದೊಡ್ಡ ವ್ಯಕ್ತಿ. ವಿದ್ಯಾವಂತ ಮೋತೀಲಾಲರು ಶ್ರೀಮಂತರು. ಆದುದರಿಂದ ಅತ್ಯಂತ ವೈಭವದಿಂದಲೇ ಮಗನ ಮದುವೆ ಜರಗಿಸಲು ಅವರ ಅಪೇಕ್ಷೆ ಲಗ್ನಕ್ಕೆ ಕೆಲವು ತಿಂಗಳ ಮೊದಲೇ ಸಿದ್ಧತೆ ನಡೆಯುತಿತ್ತು ಅದಕ್ಕಾಗಿ ಅನೇಕ ಗುಮಾಸ್ತರನ್ನು ಮೋತೀಲಾಲರು ನೇಮಿಸಿದ್ದರು, ದಿನಂಪ್ರತಿ ಆನಂದ ಭವನಕ್ಕೆ ನೂರಾರು ಸಿಂಪಿಗರು, ಸರಾಫರು, ವ್ಯಾಪಾರಿಗಳು, ಬಂಧುಗಳು, ಬಂದುಹೋಗುತಿದ್ದರು ಹುಡುಗಿಯ ಮನೆ ದಿಲ್ಲಿಯಲ್ಲಿ. ಮದುವೆ ಕೂಡಾ ನೆರವೇರಬೇಕಾದ್ದುದು ಅಲ್ಲೇ ಆದುದರಿಂದ ಮೋತೀಲಾಲರು ನೂರಾರು ಮಿತ್ರರೊಂದಿಗೆ ಒಂದು ವಾರದ ಮೊದಲೇ ವಿಶೇಷ ರೇಲ್ವೆಗಾಡಿಯನ್ನು ಗೊತ್ತುಮಾಡಿ ದಿಲ್ಲಿಗೆ ದಿಬ್ಬಣ ಒಯ್ದರು ದಿಲ್ಲಿಯಲ್ಲಿ ಸಾವಿರಾರು ಬಂಧುಗಳು ಬಂದುಕೂಡಿದರು ದಿಲ್ಲಿಯಲ್ಲಿ ಅವರನ್ನು ಇದಿರುಗೊಳ್ಳಲು ಮತ್ತು ದಿಬ್ಬಣಿಗರಿಗೆ ನೆಲಸಲು ಮಾಡಿದ ವ್ಯವಸ್ಥೆ ಸಾಕಾಗಲಿಲ್ಲ ಆದುದರಿಂದ ಮೋತೀಲಾಲರು ಡೇರೆಗಳನ್ನು ಹೊಡೆಸಿದರು. ಆ ಡೇರೆಗಳ ಸಾಲು ಮೊಗಲ್ ಚಕ್ರವರ್ತಿಗಳ ಶಿಬಿರಗಳಂತೆ ಕಾಣುತಿತ್ತು. ರಾಜಠೀವಿಯಿಂದಲೇ ಜವಾಹಿರಲಾಲರ ಮದುವೆ ಜರುಗಿತು ತೆಳ್ಳಗೆ ಬೆಳ್ಳಗೆ ಇದ್ದ ಕಮಲಾ ರಾಜಕುಮಾರಿಯಂತೆ ಶೋಭಿಸುತಿದ್ದಳು ಅವರ ಮದುವೆಗಾಗಿ ಮೋತೀಲಾಲರು ಎಷ್ಟು ವೆಚ್ಚಮಾಡಿದರೆಂದು ಹೇಳಲಿಕ್ಕಿಲ್ಲ. ಮದುವೆ ಮಂಟಪದಲ್ಲಿ ಬಂದುಂಡು ಹೋದವರ ಸಂಖ್ಯೆಯು ಅಷ್ಟಿಷ್ಟಲ್ಲ. ದಿಲ್ಲಿ ಅಂತಹ ಮನೋಹರ ದೃಶ್ಯವನ್ನು ಕಂಡುದುದೇ ಕಡಿಮೆ ಮದುವೆ ಮುಗಿದಮೇಲೆ ಜವಾಹಿರಲಾಲರು ವಿಜಯಲಕ್ಷ್ಮಿ ಕಮಲಾರಿಬ್ಬರನ್ನು ಕರೆದುಕೊಂಡು ಸುಂದರ ಕಾಶ್ಮೀರ ಸಂಸ್ಥಾನಕ್ಕೆ ತೆರಳಿದರು. ಕಾಶ್ಮೀರ್ ಕಣಿವೆಯಲ್ಲಿ ಅವರಿಬ್ಬರನ್ನು ಬಿಟ್ಟು ಜವಾಹಿರಲಾಲರು ಹಿಮದಿಂದ ತುಂಬಿದ ಉನ್ನತ ಶಿಖರವನ್ನೇರಿದರು ಆ ಮಹಾ ಗಿರಿಕಂದರಗಳಲ್ಲಿ ಎಲ್ಲಿ ನೋಡಿದರೂ ಹಿಮವೇ ಒಂದು ಗಿಡ ಮರವಿಲ್ಲ. ಹುಲ್ಲು, ಕಲ್ಲು,

ಮುಳ್ಳುಗಳಲ್ಲ. ಕಾಲು ಜಾರಿ ಉರುಳಿದರೆ ದೇವರೇ ಗತಿ. ಸಿಂಹದಂತಹ ಎದೆಗಾರಿಕೆ ಇದ್ದವರಿಗೆ ಮಾತ್ರ ಅದು ಆಗುವ ಕೆಲಸ. ಕಮಲಾ ಮತ್ತು ವಿಜಯಲಕ್ಷ್ಮಿ ಕಾಶ್ಮೀರ್ ಕಣಿವೆಯ ಸೊಬಗನ್ನು ನೋಡುತ್ತ ಸಮಯ ಕಳೆದರು. ಒಂದು ವರುಷದೊಳಗೆ ಜವಾಹಿರಲಾಲ್ ದಂಪತಿಗಳಿಗೆ ಇಂದು ಮುಖಿ ಇಂದಿರಾ ಜನಿಸಿದಳು. ಸಂಸಾರ ಸುಖಮಯವಾಗಿ ಸಾಗಿತು

## ಗಾಂಧೀಜಿಯ ಆಗಮನ

ಸಂಸಾರದಲ್ಲಿ ಸಿಲುಕಿದರೂ ಜವಾಹಿರಲಾಲರ ಒಲವು ರಾಜಕಾರಣದ ಕಡೆಗಿದ್ದಿತು. ಇಂಗ್ಲಂಡಿನಿಂದ ಹಿಂತಿರುಗಿದಾಗಲೇ ಅವರ ಮನೋವೃತ್ತಿ ರಾಜಕಾರಣದತ್ತ ಹರಿದಿದ್ದಿತು. ಜವಾಹಿರಲಾಲರ ಉಗ್ರ ವಿಚಾರಗಳನ್ನು ಕಂಡು ಮೋತೀಲಾಲರಿಗೆ ಭಯ. ಬಂಗಾಲದ ಭಯೋತ್ಪಾದಕ ಗುಂಪಿನೊಡನೆ ಸೇರುವರೋ ಎಂಬ ತಳಮಳ ಆದುದರಿಂದ ಆದಷ್ಟು ಮಟ್ಟಿಗೆ ಮಗನನ್ನು ಹಿಡಿತದಲ್ಲಿಟ್ಟುಕೊಳ್ಳಲು ಮೋತೀಲಾಲರ ಪ್ರಯತ್ನ. ಅದಕ್ಕಾಗಿ ಅವರು ಬಲಾತ್ಕಾರ ಅಥವಾ ಒತ್ತಾಯ ಮಾಡುತಿದ್ದಿಲ್ಲ ಜವಾಹಿರಲಾಲರೊಡನೆ ಸ್ನೇಹದಿಂದ ಯಾವಾಗಲೂ ಚರ್ಚಿಸುತ್ತಿದ್ದರು. ತಂದೆಗೆ ಮಗನ ಮೇಲೆ ಅತಿಮೋಹ. ಮಗನಿಗೆ ತಂದೆಯ ಮೇಲೆ ಅಪಾರವಾದ ಪ್ರೀತಿ ಗೌರವ. ಆ ಆದರವಿದ್ದುದರಿಂದಲೇ ಜವಾಹಿರಲಾಲರು ಸಂಯಮಿಗಳಾದರು ಆದರೆ ೧೯೧೯ರಲ್ಲಿ ಗಾಂಧೀಜಿ ಆನಂದ ಭವನಕ್ಕೆ ಬಂದಮೇಲೆ ಅಲ್ಲಿ ಒಂದು ಚಮತ್ಕಾರವೇ ನಡೆದು ಹೋಯಿತು. ಗಾಂಧೀಜಿಯ ಕಡೆ ಜವಾಹಿರಲಾಲರು ಸಂಪೂರ್ಣ ಆಕರ್ಷಿಸಲ್ಪಟ್ಟರು. ಗಾಂಧೀಜಿಯವರ ವಿಚಾರ ಪ್ರಣಾಲಿಯನ್ನು ಪೂರ್ಣ ಜವಾಹಿರಲಾಲರು ಒಪ್ಪದಿದ್ದರೂ ಗಾಂಧೀಜಿ ಅಸಾಧಾರಣ ಪುರುಷರೆಂಬ ಒಂದು ದಿವ್ಯದೃಷ್ಟಿ ಜವಾಹಿರಲಾಲರಲ್ಲಿ ಮೊಳೆಯಿತು. ತಾವು ಅವರೊಡನೆ ಕೂಡಿಕೊಳ್ಳುವುದಾಗಿ ಜವಾಹಿರಲಾಲರು ನಿರ್ಧರಿಸಿದರು ಮೋತೀಲಾಲರಿಗೆ ಉಭಯ ಸಂಕಟ. ಗಾಂಧೀಜಿಯವರ ಹೆಜ್ಜೆಯಲ್ಲಿ ಹೆಜ್ಜೆ ಹಾಕಿದರೆ ಅನಂತ ಕಷ್ಟವನ್ನನುಭವಿಸಬೇಕಲ್ಲ! ಲಾಠಿಗೆ ಎದೆಯೊಡ್ಡಬೇಕು. ಸೆರೆಮನೆಗೆ ಪ್ರವೇಶಿಸಬೇಕು ಶ್ರೀಮಂತ ಬಾಳುವೆ ನಡೆಸಿದ ಮಗನಿಂದ ಅದು ಸಾಧ್ಯವೇ? ಒಂದುವೇಳೆ ಆ ದಾರಿ ಹಿಡಿದರೆ ಮಗನಿಗೆ ಎಷ್ಟು ಕಷ್ಟವಾಗ

ಲಿಕ್ಕಿಲ್ಲ ! ಮೋತೀಲಾಲರು ಈ ರೀತಿ ಚಿಂತಿಸುತ್ತಿದ್ದರು. ಸೆರೆಮನೆಯಲ್ಲಿ ನೆಲದ ಮೇಲೆ ಮಲಗಿಕೊಳ್ಳಬೇಕಾಗಿದೆಯೆಂದು ಮೋತೀಲಾಲರಿಗೆ ಹೇಳಿದ್ದರು ಅದು ಹೇಗೆ ಸಾಧ್ಯವೆಂದು ಪರೀಕ್ಷಿಸಲು ಮೋತೀಲಾಲರು ಒಂದೊಂದು ರಾತ್ರಿ ಬರಿ ನೆಲದಮೇಲೆ ಮಲಗುತ್ತಿದ್ದರು ಒಂದೊಂದು ದಿನ ತಂದೆ ಮಗ ಮಾತನಾಡುತ್ತಿದ್ದಿಲ್ಲ ಒಳಗಿಂದೊಳಗೆ ಕುದಿಯುತ್ತಿದ್ದರು. ಇಬ್ಬರೂ ದೃಢ ಚಿತ್ತವುಳ್ಳವರು. ಆದರೆ ಒಬ್ಬರನ್ನೊಬ್ಬರು ನೋಯಿಸಲು ಹಿಂಜರಿಯುವ ಸುಸಂಸ್ಕೃತರು. ಕೊನೆಗೆ ಮಗನ ವಿಚಾರಕ್ಕೆ ತಂದೆ ಮಣಿಯಬೇಕಾಯ್ತು. ಜಾಲಿಯನ್‌ವಾಲಾಭಾಗದಲ್ಲಿ ಬ್ರಿಟಿಶರು ನಡೆಸಿದ ಅತ್ಯಾಚಾರವೂ ಅದಕ್ಕೆ ಒಂದು ಕಾರಣವಾಗಿ ಪರಿಣಮಿಸಿತು ಆ ಕೊಲೆಯಿಂದ ಮೋತೀಲಾಲರು ಬಹಳ ವ್ಯಸನಪಟ್ಟರು ಗಾಂಧೀಜಿಯ “ಸತ್ಯಾಗ್ರಹ’ ದ ಹೊರತು ಬೇರೆ ಮಾರ್ಗವಿಲ್ಲವೆಂಬ ಭಾವವೂ ಅವರಲ್ಲಿ ಅಂಕುರಿಸಿತು ಆದುದರಿಂದ ಗಾಂಧೀಜಿಯವರೊಡನೆ ಕೂಡಿಕೊಳ್ಳಲು ಮಗನಿಗೆ ಒಪ್ಪಿಗೆ ಕೊಟ್ಟರಲ್ಲದೆ ತಾವೂ ಬಂದರು. ಮೋತೀಲಾಲರಲ್ಲಿ ಮಹತ್ತ್ವದ ಬದಲಾವಣೆಯೇ ಆಗಿಹೋಯಿತು

**ಮೋತೀಲಾಲರ ಮಹಾತ್ಯಾಗ**

ಗಾಂಧೀಜಿಯವರನ್ನು ಅನುಸರಿಸಲು ತಂದೆ ಮಗ ನಿರ್ಧರಿಸಿದ ಮೇಲೆ ಇಬ್ಬರೂ ಗಾಂಧಿಯಂತಾಗಬೇಕಲ್ಲ! ವಿಲಾಸಿ ಜೀವನ ಆಗ ಹೋಗದಮಾತು ಬ್ರಿಟಿಶರೊಡನೆ ಸಹಕಾರವೂ ಅಶಕ್ಯ ಆದುದರಿಂದ, ಮೋತೀಲಾಲರು ತಮ್ಮ ವಕೀಲಿ ವೃತ್ತಿಯನ್ನು ತ್ಯಜಿಸಿದರು. ಅದರಿಂದ ಸಂಪಾದನೆಯ ಮಾರ್ಗವೇ ತಡೆ ಹಿಡಿಯಲ್ಪಟ್ಟಂತಾಯಿತು. ಮೋತೀಲಾಲರು ಲಕ್ಷಗಟ್ಟಲೆ ಸಂಪಾದಿಸಿದ್ದರೇನೋ ನಿಜ. ಆದರೆ ಅವರು ಲೋಭಿಯಾಗಿರಲಿಲ್ಲ ಹಣ ಕೂಡಿಸಿಡುವ ಮನಃಪ್ರವೃತ್ತಿಯೇ ಅವರಲ್ಲಿರಲಿಲ್ಲ. ಒಂದೆಡೆ ಗಂಗೆಯಂತೆ ಬರುತ್ತಿತ್ತು ಇನ್ನೊಂದೆಡೆ ಗಂಗೆಯಂತೆ ಹರಿಯುತ್ತಿತ್ತು. ಈಗ ಬರುವುದು ನಿಂತಮೇಲೆ ಜೀವನವನ್ನು ಹೊಸ ಪರಿಸ್ಥಿತಿಗನುಸಾರವಾಗಿ ವ್ಯವಸ್ಥೆಗೊಳಿಸದೆ ನಿರ್ವಾಹವಿರಲಿಲ್ಲ ಆದುದರಿಂದ ಮೋತೀಲಾಲರು ತಮ್ಮ ಕುದುರೆಗಳನ್ನು ಕೋಚುಗಳನ್ನು ಮಾರಾಟ ಮಾಡಿದರು. ಸೈನ್ಯದಂತಿದ್ದ ಆಳುಗಳನ್ನು ಬಿಡಬೇಕಾಗಿ ಬಂದಿತು ಮೂರು ನಾಲ್ಕು ಅಡಿಗೆ ಭಟ್ಟರೂ

ಅವಶ್ಯ ಕಾಣಲಿಲ್ಲ. ಮನೆಯಲ್ಲಿ ದಿನಂಪ್ರತಿ ಹಬ್ಬದೂಟ, ಸಾವಿರ ಜನ ಸಂತರ್ಪಣೆಯನ್ನು ನಿಲ್ಲಿಸಿದರು. ಬೆಲೆಯುಳ್ಳ ವಸ್ತ್ರಗಳನ್ನೂ ಒಟ್ಟಿ ಬಗೆಗಳನ್ನೂ ವಿಕ್ರಯಿಸಿದರು. ವಕೀಲಿ ವೃತ್ತಿ ಬಿಟ್ಟಮೇಲೆ ಒಂದು ಖಟ್ಲೆ ಹಿಡಿಯಲು ಮಿತ್ರರೊಬ್ಬರು ಬಂದು ಒತ್ತಾಯ ಮಾಡಿದರು. ಒಂದು ಲಕ್ಷ ರೂಪಾಯಿಗಳನ್ನು ಕೊಡುವುದಾಗಿ ತಿಳಿಸಿದರು. ಮೋತೀಲಾಲರು ಒಪ್ಪಲಿಲ್ಲ. ಅವರ ಈ ಮಹಾತ್ಯಾಗವು ಅನುಪಮವಾದುದು. ಬುದ್ಧನ ಮಹಾತ್ಯಾಗಕ್ಕೆ ಹೋಲುವುದೆಂದು ಹೇಳಿದರೆ ಅತಿಶಯೋಕ್ತಿಯಲ್ಲ

**ಸತ್ಯಾಗ್ರಹ**

ಯುದ್ಧಾಂತ್ಯವಾದ ಮೇಲೆ ಗಾಂಧೀಜಿ ಸತ್ಯಾಗ್ರಹವನ್ನಾರಂಭಿಸಿದರು ಪಂಜಾಬಿನ ಅತ್ಯಾಚಾರದಿಂದ ಅವರ ಮನಸ್ಸು ನೊಂದು ಹೋಗಿತ್ತು. ನೆಹ್ರು ಕುಟುಂಬದ ಆಧಾರ ಸ್ತಂಭದಂತಿದ್ದ ಜವಾಹಿರಲಾಲರು ೧೯೨೧ರ ಸತ್ಯಾಗ್ರಹದಲ್ಲಿ ಪ್ರಮುಖ ಪಾತ್ರ ವಹಿಸಿದರು ಮಗನ ಬಂಧನವಾದ ಮೇಲೆ ತಂದೆಯೂ ಹೊರಟರು. ಸತಿ ಮೋತೀಲಾಲ್, ಸೊಸೆ ಕಮಲಾ ಕೂಡಾ ಮನೆಯಲ್ಲಿ ಉಳಿಯಲಿಲ್ಲ. ವಿಜಯಲಕ್ಷ್ಮಿ ಮತ್ತು ಕೃಷ್ಣ ಕೂಡಾ ಗಾಂಧೀಜಿಯ ಕರೆಗೆ ಓಗೊಟ್ಟರು. ಇಡೀ ಮನೆತನವೇ ಗಾಂಧೀಜಿಯವರ ಹಿಂದೆ ಹೊರಟಿತು. ಆನಂದ ಭವನದಲ್ಲಿ ಪೋಲೀಸರದೆ ಆಟ. ಕ್ಷುಲ್ಲಕ ಕಾರಣಗಳಿಗಾಗಿ ಅವರು ಆನಂದ ಭವನವನ್ನು ಮುತ್ತುತಿದ್ದರು. ಅಲ್ಪ ಸ್ವಲ್ಪ ದಂಡಕ್ಕಾಗಿ ಬೆಲೆಯುಳ್ಳ ವಸ್ತುಗಳನ್ನು ಒಯ್ಯುತಿದ್ದರು. ಒಮ್ಮೆ ಐದುನೂರು ರೂಪಾಯಿಗಳ ದಂಡ ಸಂಗ್ರಹಿಸಲು ಅನೇಕ ಸಾವಿರ ರೂ ಗಳ ರತ್ನಗಂಬಳಿಯನ್ನು ಹೊತ್ತುಬಿಟ್ಟರು ಈ ಸತ್ಯಾಗ್ರಹಿಗಳ ನಿಜವಾದ ತ್ಯಾಗ, ಧೈರ್ಯವನ್ನು ನೋಡಿ ಗಾಂಧೀಜಿ ಮನಮೆಚ್ಚಿದರು. ಮದುವೆಯಾಗುವ ವಯಸ್ಸಿಗೆ ಬಂದ ವಿಜಯಲಕ್ಷ್ಮಿ ಸತ್ಯಾಗ್ರಹಿಯಾದುದನ್ನು ನೋಡಿ ಅವರಿಗೆ ಇನ್ನಷ್ಟು ಆಶ್ಚರ್ಯ ಕಾಂಗ್ರೆಸ್ ದೀಕ್ಷೆ ಹೊಂದಿದ ಮೇಲೆ ಅವರ ಸುಖವೆಲ್ಲ ತನ್ನದೆಂದು ಗಾಂಧೀಜಿಯ ಭಾವನೆ. ಈ ಹುಡುಗಿಗೊಂದು ಗಂಡನನ್ನು ಗೊತ್ತುಮಾಡಿದರೆ ಇಬ್ಬರು ಸತ್ಯಾಗ್ರಹಿಗಳು ದೊರಕಿದಂತಾಗುವದೆಂದು ಗಾಂಧೀಜಿ ಆಲೋಚಿಸಿದ್ದಿರಲೂ ಬಹುದು ! ಅಂತೂ ವಿಜಯಲಕ್ಷ್ಮಿಯ ಮದುವೆಯ ಶುಭ ಮುಹೂರ್ತವೇ ಬಂದಿತ್ತೆಂದೆನಬಹುದು.

# ೪. ಗೃಹಲಕ್ಷ್ಮಿ

ಮುಂಜಾನೆಯ ಶೀತಲ, ಮನೋಲ್ಲಾಸಕ ಎಳೆಬಿಸಿಲಿನಂತೆ ಗಾಂಧೀಜಿಯವರ ಕಾರ್ಯದರ್ಶಿ ಮಹದೇವ ದೇಸಾಯರು ಆನಂದ ಭವನಕ್ಕೆ ಬಂದರು. ಅವರು ಬಂದುದು ೧೯೨೦ರಲ್ಲಿ. ವಿಜಯಲಕ್ಷ್ಮಿಯೊಡನೆ ಹರಟೆ ಹೊಡೆಯುತ್ತಿದ್ದಾಗ "ಮಾಡರ್ನ್ ರಿವ್ಯೂ" ಪತ್ರಿಕೆಯನ್ನು ದೇಸಾಯರು ಉಲ್ಲೇಖಿಸಿ ಅದರಲ್ಲಿ ಬರೆದ ಒಂದು ಲೇಖನ ಬಹಳ ಚೆನ್ನಾಗಿದೆಯೆಂದರು "ಅದರ ಲೇಖಕರು ನನ್ನ ಸಹಪಾಠಿ. ಒಂದೇ ಕಾಲೇಜಿನಲ್ಲಿ ಕಲಿತೆವು. ಆಮೇಲೆ ಅವರು ಲಂಡನಿಗೆ ತೆರಳಿ ಬ್ಯಾರಿಸ್ಟರಾದರು. ನನ್ನ ಪರಮ ಮಿತ್ರ. ಸಂಸ್ಕೃತ ಪಂಡಿತ ಜರ್ಮನ್, ಫ್ರೆಂಚ್, ಲ್ಯಾಟಿನ್ ಮೊದಲಾದ ಅನೇಕ ಭಾಷಾ ವಿಶಾರದರು." ಎಂದೂ ದೇಸಾಯರು ಮುನ್ನುಡಿ ಓದಿದರು. ತಮ್ಮ ಮಿತ್ರರ ರೂಪಗುಣ ಪ್ರತಿಭೆಗಳನ್ನೂ ಬಣ್ಣಿಸಿದರು. ವಿಜಯಲಕ್ಷ್ಮಿ ಪತ್ರಿಕೆಯ ಹಾಳೆಗಳನ್ನು ತಿರುವಿಹಾಕಿ ನೋಡಿದಾಗ ಲೇಖಕರ ಹೆಸರು "ರಣಜಿತ್ ಪಂಡಿತ್" ಎಂದಿತ್ತು ಕಾಠೇವಾಡದ ಈ ಮಹಾನುಭಾವನ ಭೆಟ್ಟಿಯಾಗುವ ಸುಯೋಗವೂ ಲಭಿಸಿತು. ಪರಿಚಯದಿಂದ ಸ್ನೇಹ, ಸ್ನೇಹದಿಂದ ಪ್ರೇಮ ಒಂದಕ್ಕೊಂದು ಚಿನ್ನದ ಸರಪಣಿಯಾಗಿ ಸುತ್ತಿಕೊಂಡಿತು. "ನನ್ನನ್ನು ಮದುವೆಯಾಗುವೆಯಾ ?" ಎಂದು ರಣಜಿತ್ ಪಂಡಿತರು ಕೇಳಿ "ನಾನೂ ದೂರ ದೇಶದಿಂದ ಬಂದಿದ್ದೇನೆ. ನಿನ್ನನ್ನು ಕಾಣಲು ಅನೇಕ ಸೇತುವೆಗಳನ್ನು ದಾಟಿದ್ದೇನೆ. ಇನ್ನು ಮುಂದೆ ಇಬ್ಬರೂ ಒಟ್ಟಿಗೆ ಜೀವನ ವಾರಿಧಿಯ ಸೇತುವೆಗಳನ್ನು ದಾಟಬೇಕು" ಎಂದು ನುಡಿದರು. ಮದುವೆ ನಿಶ್ಚಯವಾಯಿತು.

**ಮದುವೆಯ ಶುಭದಿನ**

೧೯೨೧ರ ಮೇ ತಿಂಗಳ ಹತ್ತನೇ ತಾರೀಖಿನ ದಿನ ಮದುವೆಯೆಂದು ಗೊತ್ತಾಯಿತು. ಅದು ಐತಿಹಾಸಿಕ ದಿನ. ಏಕೆಂದರೆ ೧೮೫೭ರ ಸಿಪಾಯಿ

ದಂಗೆಯ ವಾರ್ಷಿಕೋತ್ಸವ ಅಂದೇ. ಆಕಸ್ಮಿಕವಾಗಿ ಆ ದಿನವನ್ನು ಹಿರಿಯರು ಆರಿಸಿಕೊಂಡಿದ್ದರು. ಆಗರಿ ಅಧಿಕಾರಿಗಳಿಗೆ ಸಂಶಯ. ಅದೇಕಾಲಕ್ಕೆ ಆನಂದ ಭವನದಲ್ಲಿ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ (ವರ್ಕಿಂಗ್ ಕಮಿಟಿ) ಸಭೆಯನ್ನು ಕೂಡಿಸಬೇಕೆಂದು ನಿರ್ಧರಿಸಿದ್ದರು. ಸ್ಥಳಿಕ ಕಾಂಗ್ರೆಸ್ ಕಾರ್ಯಕರ್ತರು ಅದೇ ದಿನ ಅಲ್ಲಾಬಾದ್ ಜಿಲ್ಲಾ ಕಾಂಗ್ರೆಸ್ ಸಭೆಯನ್ನು ಕರೆದಿದ್ದರು. ಕಾಂಗ್ರೆಸ್ ಮುಖಂಡರ ಆಗಮನದ ಸುದ್ದಿ ಹಳ್ಳಿ ಹಳ್ಳಿಗೆ ಮುಟ್ಟಿದ್ದುದರಿಂದ ರೈತರೂ ತಂಡ ತಂಡವಾಗಿ ಆನಂದ ಭವನಕ್ಕೆ ಬರಲು ಆರಂಭಿಸಿದರು. ಮೊದಲೇ ಸಂಶಯ ಚಿತ್ತರಾಗಿದ್ದ ಅಧಿಕಾರಿಗಳು ಇನ್ನಷ್ಟು ಕಳವಳ ಪಟ್ಟರು. ಮದುವೆಯ ನೆವದಿಂದ ಕ್ರಾಂತಿ ಹೂಡಲು ಆನಂದ ಭವನದಲ್ಲಿ ಸಿದ್ಧತೆ ನಡೆದಿರಬೇಕೆಂದು ಅವರ ಕಲ್ಪನೆ ಯುರೋಪಿಯನ್ನರು ಗಾಬರಿಗೊಂಡಿದ್ದರು. ಅಲ್ಲಾಬಾದ್ ಕೋಟೆಯನ್ನು ಸಜ್ಜುಗೊಳಿಸಲಾಯಿತಲ್ಲದೆ ಸೈನಿಕರನ್ನೂ ಸಿದ್ಧವಾಗಿಟ್ಟರು ದಂಗೆ ಆರಂಭವಾದರೆ ಯುರೋಪಿಯನ್ ನಿವಾಸಿತರು ಕೋಟೆಯೊಳಗೆ ಆಶ್ರಯ ಪಡೆಯಬೇಕೆಂದೂ ಅವರಿಗೆ ತಿಳಿಸಲಾಯ್ತು. ಆದರೆ, ಅವರ "ದುರ್ದೈವ'' ದಿಂದ ಅಂತಹ ಘಟನೆಯೇನೂ ನಡೆಯಲಿಲ್ಲ ಶಾಂತವಾಗಿಯೇ ಸಭೆಗಳು ಜರುಗಿದವು. ಶಾಂತಿಯಿಂದಲೇ ವಿವಾಹ ನೆರವೇರಿತು. ಗಾಂಧೀಜಿ, ಆಲಿ ಸಹೋದರರು ಮೊದಲಾದ ಕಾಂಗ್ರೆಸ್ ಮುಖಂಡರು ವಧೂವರರನ್ನು ಹರಸಿದರು. ಆನಂದ ಭವನದಿಂದ ಒಂದು "ಮಿನಿವಾಳ್ ಹಕ್ಕಿ" ತನ್ನ ಇನಿಯನೊಡನೆ ಪ್ರೇಮ ಗಾನ ಮಾಡುತ್ತ ಹಾರಿ ಹೋಯಿತು ಕಾಲಕ್ರಮೇಣ ಅವರಿಗೆ ಚಂದ್ರಲೇಖಾ, ನಯನ ತಾರಾ ಮತ್ತು ರೀತ ವಿಕಸ್ಸಾ ಎಂಬ ಮೂವರು ಹೆಣ್ಮಕ್ಕಳು ಜನಿಸಿದರು.

**ಆನಂದ ಭವನದ ಹಾವು**

ಹೆಚ್ಚು ಕಡಿಮೆ ಇದೇ ಕಾಲಕ್ಕೆ ಆನಂದ ಭವನದ ತೋಟದಲ್ಲಿದ್ದ ಒಂದು ನಾಗರ ಹಾವಿಗೆ ಅವಸಾನ ಬಂತು. ಈ ಹಾವು ಎಲ್ಲಿಂದಲೋ ಬಂದು ತೋಟಕ್ಕೆ ಪ್ರವೇಶಿಸಿತ್ತು. ಆ ಮೇಲೆ ಅಲ್ಲಿಂದ ತೆರಳಲಿಲ್ಲ. ಮನೆತನದ ಒಬ್ಬ ಮನುಷ್ಯನಂತೆಯೇ ಎಲ್ಲರೂ ಅದನ್ನು ಪ್ರೀತಿಸಲಾರಂಭಿಸಿದರು.

ಅದಕ್ಕಾಗಿ ತೋಟದಲ್ಲಿ ಒಂದು ಗುಡಿಸಲನ್ನು ಕಟ್ಟಿಸಿದ್ದರು. ಅದು ಹೆಡೆಯುದಳಿಯುತ್ತ ಅನೇಕ ವರುಷಗಳಿಂದಲೂ ಅಲ್ಲೇ ವಾಸಿಸುತ್ತಿತ್ತು. ಯಾರನ್ನೂ ಅದು ಕಚ್ಚಿರಲಿಲ್ಲ ಯಾರನ್ನೂ ಹೆದರಿಸುತ್ತಿದ್ದಿಲ್ಲ ಮಕ್ಕಳಿಗೂ ಅದು ಹಾನಿಮಾಡಲಿಲ್ಲ "ಮೋತೀಲಾಲರ ಸಂಪತ್ತನ್ನು ರಕ್ಷಿಸಲು ಬಂದಿದೆ" ಎಂದು ಎಲ್ಲರೂ ಹೇಳುತಿದ್ದರು ಆದರೆ ೧೯೨೦ರಲ್ಲಿ ಆನಂದ ಭವನಕ್ಕೆ ಬಂದ ಹೊಸ ಸೇವಕನೊಬ್ಬನು ಹೆದರಿ ಅದನ್ನು ಕೊಂದನು ಯಾರು ಏನೇ ಹೇಳಲಿ ಅಂದಿನಿಂದ ಮೋತೀಲಾಲರ ಸಂಪತ್ತು ಕರಗಲಾರಂಭಿಸಿತು ಆ ಮೇಲೆ ಕೆಲವು ದಿನಗಳೊಳಗೆ ಮೋತೀಲಾಲರು ರಾಜಕೀಯ ರಂಗವನ್ನು ಪ್ರವೇಶಿಸಿದರು. ಮನೆಯ ವಿಲಾಸಜೀವನಕ್ಕೆ ಸಂಚಕಾರ ಬಂದಿತು. ತಂದೆ ಮಗ ಇಬ್ಬರೂ ಸೆರೆಮನೆ ಸೇರಿದರು "ಹಾವು ಮರಣ ಹೊಂದುದರಿಂದಲೇ ಹೀಗಾಯಿತು" ಎಂದು ಮನೆಯ ಆಳುಗಳು ಹೇಳುತಿದ್ದರಂತೆ. ಆದರೆ ಒಂದು ದೃಷ್ಟಿಯಲ್ಲಿ ಅದೂ ಹಿತಕಾರವೇ. ಏಕೆಂದರೆ ಸಂಪತ್ತಿನ ಮೋಹ, ಸ್ವಂತ ಆಸ್ತಿಯ ಮೋಹಗಳನ್ನು ತ್ಯಜಿಸಿದ ನೆಹರು ಮನೆತನವು ದೇಶಸೇವೆಗಾಗಿ ಮನಃಪೂರ್ವಕವಾಗಿ ಸಿದ್ಧವಾಯಿತು ಮನೆಯಲ್ಲಿದ್ದ ಹಾವು ಸತ್ತ ಬಳಿಕ ಸಾಮ್ರಾಜ್ಯಶಾಹಿಯೆಂಬ ವಿಷ ಹಾವನ್ನು ಕೊಲ್ಲಲು ಅವರು ಸಿದ್ಧರಾದರು. ಈ ಬ್ರಿಟಿಶ್ ಹಾವು ಭಾರತದ ತೋಟದಲ್ಲೇ ಹಾವಳಿಯನ್ನೆಬ್ಬಿಸಿತ್ತು. ಅದರ ಆಟವನ್ನು ನಿಲ್ಲಿಸಲು ಅತ್ಯಂತ ಹುಮ್ಮಸ್ಸಿನಿಂದ ಅವರೆಲ್ಲರೂ ಅಣಿಯಾದರು. ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್ ಕೂಡಾ ಈ ಕಾರ್ಯದಲ್ಲಿ ಹಿಂದೆ ಬೀಳಲಿಲ್ಲ. ತನ್ನೊಂದಿಗೆ ಗಂಡನನ್ನು ಸೆಳೆದುಕೊಂಡಳು

**ಸೆರೆಮನೆಗೆ**

ಗಾಂಧೀಜಿಯವರು ರಾಷ್ಟ್ರೀಯ ಹೋರಾಟದ ನಾಯಕತ್ವವನ್ನು ವಹಿಸಿದ್ದರು. ಅವರ ಕರೆಯನ್ನು ಆಲಿಸಿ ದೇಶದಾದ್ಯಂತ ಚಳವಳಿ ಆರಂಭವಾಯಿತು. ಸತ್ಯ ಮತ್ತು ಅಹಿಂಸೆ ಅವರ ಮಹಾಮಂತ್ರ ಅಸಹಕಾರ ಅವರ ದಿವ್ಯಾಸ್ತ್ರ. ೧೯೨೧ರಲ್ಲಿ ಎಲ್ಲಿ ನೋಡಿದರೂ ಬಂಧನಸತ್ರ ನೆಹರು ಮನೆತನದ ಎಲ್ಲ ಸದಸ್ಯರಿಗೂ ಬೆದರಿಕೆ ಹಾಕಲಾಗಿತ್ತು. ಆದರೆ ಸೆರೆ ಹಿಡಿದಿರಲಿಲ್ಲ. ಆದರೆ ಅದೇ ವರುಷಾಂತ್ಯದಲ್ಲಿ ಬಂದ ರಾಜಕುಮಾರನನ್ನು

ಬಹಿಷ್ಕರಿಸಲು ನಿರ್ಧರಿಸಿದುದರಿಂದ ಇದ್ದಬಿದ್ದವರನ್ನು ಬಂಧಿಸಲು ಆರಂಭಿಸಿದರು. ಮೋತೀಲಾಲರೂ ಜವಾಹರಲಾಲರೂ ಸೆರೆಮನೆಗೆ ತೆರಳಿದರು. ವಿಜಯಲಕ್ಷ್ಮಿ ಕೂಡಾ ಹಿಂದೆ ಉಳಿಯಲಿಲ್ಲ. ಆಗಿನ ಸೆರೆಮನೆಗಳ ಸ್ಥಿತಿಗತಿಗಳನ್ನು ಬಣ್ಣಿಸುವುದೂ ಕಷ್ಟ. ಅದನ್ನು ಅನುಭವಿಸಲು ಬಹಳ ಧೈರ್ಯ, ಸಂಯಮಗಳೂ ಬೇಕು. "ನಾವಿದ್ದ ಕೊಠಡಿಯಲ್ಲಿ ಇಲಿಗಳು ಸದಾ ಓಡುತ್ತಿದ್ದವು" ಎಂದು ವಿಜಯಲಕ್ಷ್ಮಿ ಬರೆದಿರುವಳು. ಹುಳಹುಪ್ಪಟೆಗಳೂ ಕಡಿಮೆಯಿರಲಿಲ್ಲ. ಅವು ಕೈಕಾಲಿನ ಮೇಲೂ ಹರಿದುಕೊಂಡು ಬರುತ್ತಿದ್ದವು. ಬಟ್ಟೆ ಬರೆಯೂ ಕೊಳಕು. 'ಸೆರೆಮನೆಗಳಲ್ಲಿ ಸ್ವಚ್ಛ ಬಟ್ಟೆ ದೊರೆಯದಿದ್ದುದೊಂದೇ ನನಗೆ ಬೇಸರ. ಎಷ್ಟು ಸಾಬೂನು ಉಪಯೋಗಿಸಿದರೂ ಅದರ ಹಣೆಬರಹ ಅಷ್ಟೇ. ಜೇಲಿನಲ್ಲಿ ಬಿಳಿ ಬಟ್ಟೆಯನ್ನೇ ತೊಡಬಾರದು" ಎಂದು ವಿಜಯಲಕ್ಷ್ಮಿ ಬರೆದಿರುವಳು. ಹೊತ್ತಗೆಗಳು, ಗ್ರಂಥಗಳ ರಾಶಿಯನ್ನು ಒಯ್ದಿದ್ದಳಂತೆ. ಗಂಡನಂತೆ ಅವಳಿಗೂ ಪುಸ್ತಕದ ಮೇಲೆ ಭಾರೀ ಪ್ರೀತಿ. ಕವಿಯ ಹೆಂಡತಿಯಾದ ಮೇಲೆ ಕೇಳಬೇಕೆ? ಅವಳಿಗೂ ಸಾಹಿತ್ಯದ ಹುಚ್ಚು ನೆಚ್ಚು. ರಣಜಿತ್ ಆಗಾಗ ಒಳ್ಳೊಳ್ಳೆ ಪುಸ್ತಕಗಳನ್ನು ಕಳಿಸುತ್ತಿದ್ದರು. ಅವರೂ ಅದೇ ಸೆರೆಮನೆಯ ಯಾವುದೋ ಇನ್ನೊಂದು ಕೊಠಡಿಯಲ್ಲಿದ್ದರು. ಆದರೆ ಒಬ್ಬರಿಗೊಬ್ಬರ ಮುಖ ದರ್ಶನವಿಲ್ಲ. 'ಇದೇ ಜೇಲಿನಲ್ಲಿ ಯಾವುದೋ ಭಾಗದಲ್ಲಿ ಅವರಿರಬೇಕು. ಆದರೂ ಎಷ್ಟೋ ದೂರವಿದ್ದಂತೆ ಕಾಣುತ್ತಿದೆ. ಅವರ ದರ್ಶನ, ಸವಿನುಡಿಗಳಿಗಾಗಿ ಹಾತೊರೆಯುತ್ತಿದ್ದೇನಲ್ಲ' ಎಂದು ತನ್ನ ಆಶೆಯನ್ನು ಅವಳು ವ್ಯಕ್ತಪಡಿಸಿದ್ದಳು.

**ಚೌರಿ ಚೌರ**

ಚೌರಿ ಚೌರದಲ್ಲಿ ಪೋಲೀಸರ ಅತ್ಯಾಚಾರವನ್ನು ಸಹಿಸಲಾರದೆ ರೇಗಿಗೆದ್ದ ಜನರು ಕೆಲವು ಪೋಲೀಸರನ್ನು ಜೀವಂತ ಸುಟ್ಟರು. ಗಾಂಧೀಜಿಗೆ ಇದು ಸಂದೋರಲಿಲ್ಲ. ಅಹಿಂಸೆಗೆ ಭಂಗ ಬಂದಿತೆಂದು ಅವರ ಅಭಿಪ್ರಾಯ. ಆದುದರಿಂದ ಶಾಸನ ಭಂಗ ಹೋರಾಟವನ್ನು ನಿಲ್ಲಿಸಲು ಅವರು ಆಜ್ಞಾಪಿಸಿದರು. ಹೋರಾಟ ನಿಲ್ಲಿಸಿದುದರಿಂದ ಅನೇಕ ಮುಖಂಡರು ಅಸಮಾಧಾನಪಟ್ಟರು. ಮೋತೀಲಾಲರಿಗೂ ಸರಿಗಾಣಲಿಲ್ಲ. ಗಾಂಧೀಜಿಯ ಆಜ್ಞೆಯನ್ನು

ಮಾತ್ರ ಅವರು ಶಿರಸಾಪಾಲಿಸಿದರು. ಆದರೆ ಸೆರೆಮನೆಯಿಂದ ಹೊರಗೆ ಬಂದಮೇಲೆ ಗಾಂಧೀಜಿಯವರ ವಿಚಾರದ ಬಗ್ಗೆ ಭಿನ್ನಾಭಿಪ್ರಾಯ ವ್ಯಕ್ತಪಡಿಸಿದರು. ಶಾಸನ ಸಭೆಗಳಿಗೆ ಪ್ರವೇಶಿಸಿ ಒಳಗಿಂದ ಹೋರಾಡಬೇಕೆಂದು ಪ್ರತಿಪಾದಿಸಿದ್ದ ಶ್ರೀ ಸಿ ಆರ್ ದಾಸರ ಸ್ವರಾಜ್ಯ ಪಕ್ಷಕ್ಕೆ ಬೆಂಬಲವಾಗಿ ನಿಂತರು. ಆದರೆ ನೆಹರು, ವಿಜಯಲಕ್ಷ್ಮಿ ಪಂಡಿತ್ ಮೊದಲಾದವರು ಗಾಂಧಿ ಶಿಬಿರದಿಂದ ಕದಲಲಿಲ್ಲ.

**ಬ್ರಿಟಿಶರ ಬಲೆ**

ನೆಹರು ಮನೆತನದ ಸದಸ್ಯರು ಗಾಂಧಿ ಹೋರಾಟದಲ್ಲಿ ಭಾಗವಹಿಸಿದ್ದುದರಿಂದ ಮುಖ್ಯವಾಗಿ ಸಂಯುಕ್ತ ಪ್ರಾಂತದಲ್ಲಿ ಅಲ್ಲೋಲಕಲ್ಲೋಲವಾಗಿತ್ತು. ಎಲ್ಲ ಜನರಿಗೂ ಅವರ ಮೇಲೆ ಪ್ರೀತ್ಯಾದರ. ಅವರೇ ಮುಂದೆ ನುಗ್ಗಿದ ಮೇಲೆ ಹಿಂಬಾಲಿಸುವ ಜನರಿಗೂ ಕಡಿಮೆಯಿರಲಿಲ್ಲ. ಇದರಿಂದ ಬ್ರಿಟಿಶ್ ಸರಕಾರಕ್ಕೆ ಭಯವಾಯಿತು. ಹೇಗಾದರೂ ಮಾಡಿ ಜವಾಹಿರಲಾಲರನ್ನು ಈ ಹೋರಾಟ ಮಾರ್ಗದಿಂದ ತಪ್ಪಿಸಿ ತಮ್ಮ ಶಿಬಿರಕ್ಕೆ ಎಳೆದುಕೊಳ್ಳಬೇಕೆಂದು ಅವರು ಆಲೋಚಿಸ ತೊಡಗಿದರು. "ಯಾವ ಬಲೆ ಬೀಸಲಿ ?" ಎಂದು ಅವರು ಚಿಂತಾತುರರಾದರು. ಕೊನೆಗೆ ಜವಾಹಿರಲಾಲರಿಗೆ ಸಂಯುಕ್ತ ಪ್ರಾಂತದಲ್ಲಿ ಮಂತ್ರಿಪದವಿ ಕೊಡುವುದಾಗಿ ಸವಿ ಮಾತುಗಳ ಆಸೆ ತೋರಿಸಿದರು. ನೋಣದಂತೆ ಜವಾಹಿರಲಾಲರು ಈ ಬಲೆಯಲ್ಲಿ ಬೀಳಬಹುದೆಂದು ಬ್ರಿಟಿಶ್ ಜೇಡನ ಆಸೆ. ಏಕೆಂದರೆ ಅನೇಕರು ಬ್ರಿಟಿಶರ ಈ ಬಲೆಯಲ್ಲಿ ಸಿಕ್ಕಿಬಿದ್ದಿದ್ದರು. ಆಗಿನ ಕಾಲಕ್ಕೆ ಮಂತ್ರಿಪದವಿಯೆಂದರೆ "ಇಂದ್ರಪದವಿ" ಯೆಂಬ ಭಾವನೆಯೂ ಜನರಲ್ಲಿತ್ತು. ಸ್ವಲ್ಪ ಚಳವಳಿಯಲ್ಲಿ ಮುಂದು ಮುಂದು ಹೋಗುವವರನ್ನು ದೊಡ್ಡ ನೌಕರಿಗಳಿಗೆ ನೇಮಿಸುತ್ತಿದ್ದರು ಬ್ರಿಟಿಶರು. ಆ ಅಧಿಕಾರಿಗಳನ್ನು ಗೌರವದಿಂದಲೂ ಕಾಣುತಿದ್ದರು. ಆದರೆ ಜವಾಹಿರಲಾಲರು ಅದರಕಡೆ ಮೋಹಿತರಾಗಲಿಲ್ಲ.

**ಹಣದ ಅಭಾವ**

ಇತ್ತ ಹಣದ ಅಭಾವದಿಂದ ಕೌಟುಂಬಿಕ ಕಷ್ಟ ಪರಂಪರೆಗಳು ಒಂದೊಂದಾಗಿ ತಲೆ ಎತ್ತಿದವು. ೧೯೨೦ರಿಂದ ಅವರ ಜೀವನದಲ್ಲಿ ಮಹತ್ವದ

ಮಾರ್ಪಾಟುಗಳಾಗಿದ್ದವು. ವಿಲಾಸೀ ವಸ್ತುಗಳನ್ನೆಲ್ಲ ಮಾರಾಟ ಮಾಡ
ಲಾಗಿತ್ತು. ದಿನನಿತ್ಯದ ವೆಚ್ಚಕ್ಕಾಗಿ ಕೂಡಾ ಒಂದೊಂದೇ ವಸ್ತುಗಳನ್ನು
ವಿಕ್ರಯಿಸಬೇಕಾಗಿ ಬಂದಿತು. ಪೋಲೀಸರು ಅನೇಕ ವಸ್ತುಗಳನ್ನು ಒಯ್ದು
ಕೇಳದ ಬೆಲೆಗೆ ಕೊಟ್ಟುಬಿಟ್ಟರು. ತೋಟವನ್ನು ಶೃಂಗರಿಸದೆ ಎರಡು
ಮೂರು ವರುಷಗಳೇ ಆದವು. ನೀರಿಲ್ಲದೆ ಗಿಡ ಬಳ್ಳಿಗಳು ಒಣಗಿದವು.
ತೋಟವನ್ನು ನೋಡುವುದೇ ಕಷ್ಟ "ಆನಂದ ಭವನದ" ರಿಪೇರಿಯನ್ನು
ಮಾಡಿರಲಿಲ್ಲ ಜೀವನಕ್ಕೆ ಅತ್ಯವಶ್ಯವಾಗಿರುವ ವಸ್ತುಗಳನ್ನು ಕಡಿಮೆ
ಮಾಡದೆ ಉಪಾಯವಿರಲಿಲ್ಲ. ರಾಜಠೀವಿಯಿಂದ ತಿಂದು ತೇಗಿದ್ದ ಮೋತೀ
ಲಾಲ ನೆಹರೂರವರಿಗೆ ಇದರಿಂದ ಬಹಳ ಕಷ್ಟವಾಯಿತು. ವಿಜಯಲಕ್ಷ್ಮಿ
ಕೃಷ್ಣಾ ಮೊದಲಾದವರು ತುಟಿ ಎರಡು ಮಾಡದೆ ಸಹಿಸಿಕೊಳ್ಳುತ್ತಿದ್ದರು.
ಜವಾಹಿರಲಾಲರಿಗೆ ಮನೆ, ಹೆಂಡತಿ ಮಕ್ಕಳ ಚಿಂತೆಯೇ ತಲೆಯಲ್ಲಿರಲಿಲ್ಲ.
ಯಾವಾಗಲೂ ಕೆಲಸದ ಗಡಿಬಿಡಿ. ಮನೆಯಲ್ಲಿರುವುದೇ ವಿರಳ. ಹಳ್ಳಿ
ಹಳ್ಳಿಗೆ ತಿರುಗುತ್ತಿದ್ದರು ಪುಸ್ತಕಗಳೆಂದರೆ ಪ್ರಾಣಕ್ಕಿಂತಲೂ ಪ್ರಿಯವಾಗಿದ್ದ
ಅವರಿಗೆ ಓದಲು ಅವಕಾಶವೇ ಸಿಗದಂತಾಯಿತು. ಮೋತೀಲಾಲರು ಬಿಡು
ವಿನ ವೇಳೆಯಲ್ಲಿ ಅಲ್ಪಸ್ವಲ್ಪ ಸಂಪಾದನೆಗಾಗಿ ಯತ್ನಿಸಲಾರಂಭಿಸಿದರು.
ಆದರೆ ಬಿಡುವು ದೊರೆಯಬೇಕಲ್ಲ!

**ಜನಸೇವೆ**

ಗಾಂಧೀಜಿ ಕೂಡಾ ಬಹಳ ಬಳಲಿದ್ದರು. ವಿಶ್ರಾಂತಿಗಾಗಿ ಜುಹೂಗೆ
ಬಂದಿದ್ದರು. ನೆಹರು ಮನೆತನದ ಸದಸ್ಯರೂ ಅಲ್ಲಿಗೆ ಬಂದರು. ಸಮುದ್ರದ
ಕರೆಯಲ್ಲಿ ಗುಡಿಸಲೊಂದರಲ್ಲಿ ವಾಸಿಸಿದರು. ಹೆಚ್ಚು ಕಡಿಮೆ ಮೂರು
ವಾರಗಳವರೆಗೆ ಇವರಿಗೂ ವಿಶ್ರಾಂತಿ ದೊರೆಯಿತು, ಆದರೆ ವಿಶ್ರಾಂತಿಗಿಂತಲೂ
ಮುಖ್ಯವಾಗಿ ರಾಜಕೀಯ ಚರ್ಚೆಗಾಗಿ ಅವರು ಆಗಮಿಸಿದ್ದರು. ಗಾಂಧೀಯ
ವಿಚಾರಗಳು ಮೋತೀಲಾಲರಿಗೆ ಸರಿದೋರಲಿಲ್ಲ. ಸ್ವರಾಜ್ಯಪಕ್ಷದಧೋರಣ
ವನ್ನು ಅನುಸರಿಸಲು ಅಡ್ಡಿಯಿಲ್ಲವೆಂದು ಗಾಂಧೀಜಿ ಮೋತೀಲಾಲರಿಗೂ
ತಿಳಿಸಿದರು. ಗಾಂಧೀಜಿಯವರೊಡನೆ ಜವಾಹಿರಲಾಲರಿಗೂ ಅನೇಕ
ವಿಷಯಗಳಲ್ಲಿ ಭಿನ್ನಾಭಿಪ್ರಾಯವಿದ್ದಿತು. ಗಾಂಧೀಜಿಯವರು ಮುಂದಿನ

ಧೋರಣ ಕಾರ್ಯಕ್ರಮವನ್ನು ಮೊದಲು ತಿಳಿಸುತ್ತಿರಲಿಲ್ಲ. ಯಾವ ಯೋಜನೆಯೂ ಅವರ ಜೇಬಿನಲ್ಲಿರಲಿಲ್ಲ. ಕಾಂಗ್ರೆಸ್ಸಿನ ವಿಧಾಯಕ ಕಾರ್ಯಕ್ರಮವನ್ನು ಆಚರಣೆಯಲ್ಲಿ ತಂದು ಜನರ ಸೇವೆ ಮಾಡಬೇಕೆಂದು ಗಾಂಧೀಜಿ ಹೇಳಿದ್ದರು ಶಾಂತಿಕಾಲದಲ್ಲಿ ಕಾಂಗ್ರೆಸ್ಸಿಗರು ಮಾಡಬೇಕಾದ ಕಾರ್ಯ ಅದೇ. ಹೋರಾಟದ ಕಾಲ ಬಂದಾಗ ಅದರಲ್ಲಿ ದುಮುಕಬೇಕೆಂದು ಅವರ ವಿಚಾರ. ಆದರೆ ಹೋರಾಟ ಆರಂಭಿಸಿದ ಮೇಲೂ ಒಂದಿಲ್ಲದಿದ್ದರೊಂದು ದುರ್ಘಟನೆ ನಡೆದರೆ ಹೋರಾಟವನ್ನು ನಿಲ್ಲಿಸಬಾರದೆಂದು ಜವಾಹಿರಲಾಲರ ಅಭಿಪ್ರಾಯ ಚೌರಿಚೌರದ ಉದಾಹರಣೆಯನ್ನು ಅವರು ಎತ್ತಿ ತೋರಿಸುತಿದ್ದರು ಜವಾಹಿರಲಾಲರಂತೆ ಶ್ರೀ ಸುಭಾಸ ಭೋಸರೂ ಮುಂದೆ ಇದೇ ರೀತಿ ಪ್ರಶ್ನಿಸಿದರು ಅವರಿಗೂ ಗಾಂಧೀಜಿಯವರಿಂದ ಸಮರ್ಪಕ ಉತ್ತರ ದೊರೆಯಲಿಲ್ಲ ಆದರೆ ಭೋಸರಂತೆ ನೆಹರು ಮಾತ್ರ ಗಾಂಧೀಜಿಯವರನ್ನು ಅಗಲಿ ಹೋಗಲಿಲ್ಲ ಏಕೆಂದರೆ ಗಾಂಧೀಜಿಯ ಅಸಾಧಾರಣ ವ್ಯಕ್ತಿತ್ವವನ್ನು ಕಂಡು ಅವರು ಆಕರ್ಷಿಸಲ್ಪಟ್ಟಿದ್ದರು ಗಾಂಧಿಜಿ ಮಹಾತ್ಮರು ಅಥವಾ ಸಾಧುಸತ್ಪುರುಷರೆಂಬ ಒಂದೇ ಕಾರಣದಿಂದ ಅವರು ಹಿಂಬಾಲಿಸಿರಲಿಲ್ಲ. ಮೋತಿಲಾಲರೂ ಗಾಂಧಿಜಿಯನ್ನು ಆ ದೃಷ್ಟಿಯಿಂದ ನೋಡುತ್ತಿರಲಿಲ್ಲ ಜವಾಹಿರಲಾಲರೂ ಗಾಂಧೀಜಿ ದೈವೀ ಮನುಷ್ಯನೆಂದು ಪೂಜಿಸುತ್ತಿರಲಿಲ್ಲ. ಗಾಂಧೀಜಿ ಎಲ್ಲರಂತಲ್ಲ. ಶಾರೀರಿಕ ದೌರ್ಬಲ್ಯವಿದ್ದರೂ ಉಕ್ಕಿನಂತಹ ಅವರ ಮನೋಬಲ ಅಸಾಧಾರಣವಾದುದು. ಯಾವ ಪಾಶವೀಶಕ್ತಿಗೂಬಗ್ಗದ ಚಿತ್ತ ಅವರಲ್ಲಿದೆ. ಅವರು ವಾಮನ ಮೂರ್ತಿಯಾಗಿದ್ದರು. ಅರೆನಗ್ನರಿದ್ದರೂ ರಾಜಶ್ರೀವಿಮತ್ತು ಮಹೋನ್ನತ ಮನಸ್ಸುಗಳಿವೆ ಅದಕ್ಕೆ ಶರಣುಹೋಗದೆ ಬೇರೆ ದಾರಿಯಿಲ್ಲ ಎಂದುಜವಾಹಿರಲಾಲರುಬರೆದಿದ್ದಾರೆ ಗಾಂಧೀಜಿಗೆವಿಧೇಯರಾದ ಅವರು " ಜನಸೇವೆಯ" ವಿಧಾಯಕ ಕಾರ್ಯಕ್ರಮಗಳಲ್ಲೇ ಆಸಕ್ತರಾದರು.

## ಯುರೋಪಿನಲ್ಲಿ ಸಂಚಾರ

ಜವಾಹಿರಲಾಲರ ಪತ್ನಿ ಕಮಲಾಳ ಆರೋಗ್ಯ ಕೆಡಲಾರಂಭಿಸಿತ್ತು ಸುಧಾರಿಸಲು ಯುರೋಪಿಗೆ ತೆರಳಬೇಕೆಂದು ಡಾಕ್ಟರರು ಸೂಚಿಸಿದರು ಆದುದರಿಂದ ೧೯೨೬ನೇ ಮಾರ್ಚತಿಂಗಳಲ್ಲಿ ಜವಾಹಿರಲಾಲರು ಪತ್ನಿ ಪುತ್ರಿಯರೊಂದಿಗೆ ಹೊರಟರು. ತಂಗಿ ವಿಜಯಲಕ್ಷ್ಮಿ, ತನ್ನಗಂಡ ಮತ್ತು

ಇಬ್ಬರು ಪುತ್ರಿಯರೊಡನೆ ಅವರನ್ನು ಹಿಂಬಾಲಿಸಿದರು. ಕೆಲವು ವಾರಗಳಾದ ಮೇಲೆ ಮೋತೀಲಾಲರು ಕೃಷ್ಣಾಳನ್ನು ಕಳಿಸಿದರು ಯುರೋಪಿನಲ್ಲಿ ಸಂಚರಿಸಿದ ವಿಜಯಲಕ್ಷ್ಮಿ ದಂಪತಿಗಳು ಬೇಗನೆ ಮರಳಿದರು. ಮೋತೀಲಾಲರ ದೇಹ ಸ್ಥಿತಿ ಚೆನ್ನಾಗಿಲ್ಲದಿದ್ದುದರಿಂದ ಅವರೂ ಯುರೋಪ್ ಸಂಚರಿಸುವಂತೆ ಗಂಡಹೆಂಡತಿ ಒತ್ತಾಯಮಾಡಿದರು ಅವರಮಾತನ್ನು ಕಡೆಗಣಿಸಲಾಗದೆ ಮೋತಿಲಾಲರೂ ಪ್ರಯಾಣಬೆಳೆಸಿದರು. ಜವಾಹರಲಾಲರು ದೇಶಕ್ಕೆ ಹಿಂತೆರಳಿದ ಮೇಲೂ ಮೋತೀಲಾಲರು ಯುರೋಪಿನಲ್ಲೇ ಸ್ವಲ್ಪ ಕಾಲ ಉಳಿದರು. ಅವರಿಗೆ ಬೇಸರವಾಗದಂತೆ ನೋಡಿಕೊಳ್ಳಲು ಪುನಃ ವಿಜಯಲಕ್ಷ್ಮಿ ತನ್ನ ಗಂಡನೊಂದಿಗೆ ತೆರಳಿದಳು.

### ವಿದೇಶೀ ವಸ್ತುಗಳಿಗೆ ಬಹಿಷ್ಕಾರ

ಜವಾಹರಲಾಲರು ಲಾಹೋರ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯಬೇಕೆಂಬ ಗೊತ್ತುವಳಿ ಪಾಸಾದುದೂ ಇದೇ ಅಧಿವೇಶನದಲ್ಲಿ. ೧೯೩೦ ಜನವರಿ ೨೬ನೇ ತಾರೀಖಿನ ದಿನವನ್ನು "ಸಂಪೂರ್ಣ ಸ್ವಾತಂತ್ರ್ಯ ದಿನ"ವನ್ನಾಗಿ ಆಚರಿಸಬೇಕೆಂದೂ ಕರೆಕೊಟ್ಟರು. ಇದೇಕಾಲಕ್ಕೆ ಮಹಾತ್ಮರು ಉಪ್ಪಿನ ಸತ್ಯಾಗ್ರಹವನ್ನು ಆರಂಭಿಸಿದರು ದೇಶಕ್ಕೆ ದೇಶವೇ ತಾಯ್ನಾಡಿನ ಸ್ವಾತಂತ್ರ್ಯದ ಕರೆಗೆ ಕಿವಿಗೊಟ್ಟಿತು. ಎಲ್ಲಿನೋಡಿದರೂ ಹರತಾಳ, ಮೆರವಣಿಗೆ, ವಿದೇಶಿ ವಸ್ತುಗಳ ಅಂಗಡಿಗಳ ಮುಂದೆ ಪಿಕೆಟಿಂಗ ನಡೆದಿತ್ತು, ಎಲ್ಲಿನೋಡಿದರೂ ಲಾಠಿಪ್ರಹಾರ ಗೋಳೀಬಾರಗಳ ದಬ್ಬಾಳಿಕೆ ಕಾಂಗ್ರೆಸ್‌ಕಾರ್ಯಕಾರೀ ಸಮಿತಿಯೇಅಕ್ರಮ ಕೂಟವೆಂದು ಆಳುವ ಮಹಾನುಭಾವರು ಸಾರಿದರು. ನೆಹರು, ಗಾಂಧೀಜಿ ಮೋತೀಲಾಲರು ಮೊದಲಾದವರನ್ನೆಲ್ಲ ಸೆರೆಹಿಡಿದರು. ವಿಜಯ ಲಕ್ಷ್ಮಿ ಪಂಡಿತರ ಗಂಡ ರಣಜಿತ್‌ಕೂಡಾ ಸೆರೆಮನೆಗೆ ತೆರಳಿದರು. ಆಸೇತು ಹಿಮಾಚಲದ ವರೆಗೆ ಸರಕಾರದ ಕ್ರೌರ್ಯವೇ ಕ್ರೌರ್ಯ

### ಬಾಗದ ಪಠಾಣರು

ದೊಡ್ಡ ದೊಡ್ಡ ಮುಖಂಡರನ್ನು ಸೆರೆಹಿಡಿದುದರ ನಿಷೇದಾರ್ಥವಾಗಿ ಪುನಃ ಹರತಾಳವನ್ನು ಆಚರಿಸಲಾಗುತಿತ್ತು. ಯಾರನ್ನಾದರೂ

ಬಂಧಿಸದ ದಿನವಿರಲಿಲ್ಲ. ಹೀಗಾಗಿ ದಿನಂಪ್ರತಿ ಹರತಾಳ ಮೆರವಣಿಗೆಗಳು ನಡೆಯುತಿದ್ದುವು ಮೆರವಣಿಗೆಗಳನ್ನು ಚದರಿಸಲು ಪೋಲೀಸರು ಲಾಠಿಪ್ರಹಾರ ಮಾಡುತಿದ್ದರು ಅದಕ್ಕೆ ಜನರು ಬಗ್ಗುತಿದ್ದಿಲ್ಲ. ಆ ಮೇಲೆ ಅವರ ಮೇಲೆ ಗುಂಡುಗಳ ಮಳೆಗರೆಯುತಿದ್ದರು ಅವಕ್ಕೆ ಜನರು ಹಿಂಜರಿಯುತಿದ್ದಿಲ್ಲ. ಗಡಿನಾಡಿನ ಪಠಾಣರು ನಿಂತಲ್ಲಿಂದ ಕದಲಲಿಲ್ಲ ಗಡಿನಾಡಿನ ಪಠಾಣರು ಬಹಳ ಶೂರರು ಅಹಿಂಸಾವಾದಿಗಳಾಗಿರಲಿಲ್ಲ. ಆದರೆ ಗಫರ್‌ಖಾನರ ನಾಯಕತ್ವದಲ್ಲಿ ಅವರು ಬಂಡೆಗಲ್ಲುಗಳಂತೆ ಪೋಲೀಸರ ಬಂದೂಕುಗಳಿಗೆ ಎದೆಯೊಡ್ಡಿ ನಿಂತರು. ಪೋಲೀಸರಿಂದ ಅವರನ್ನು ಚದರಿಸಲು ಶಕ್ಯವಾಗಲಿಲ್ಲ ಆಗ ಅಧಿಕಾರಿಗಳು ಘರವಾಲಿ ಸೈನಿಕರನ್ನು ಕಳಿಸಿದರು. ನಿರಪರಾಧಿ ನಿಶ್ಯಸ್ತ್ರ ಜನರ ಗುಂಪಿನ ಮೇಲೆ ತಾವು ಗುಂಡುಹಾರಿಸಲಾರವೆಂದು ಹಿಂದೀ ಘರವಾಲಿ ಸೈನಿಕರು ನಿರಾಕರಿಸಿದರು. ಈ ಸೈನಿಕರ ಈ ದೇಶಾಭಿಮಾನದ ನಿರ್ಧಾರದಿಂದ ಬ್ರಿಟಿಶ್ ಸರಕಾರವೇ ನಡುಗಿತು ಅದರಂತೆ ಎಲ್ಲ ಸೈನಿಕರೂ ಈ ರೀತಿ ಮಾಡಿದರೆ ಹೇಗೆ? ಬೆದರಿದ ಬ್ರಿಟಿಶರು ಬೇರೆ ಸೈನಿಕರನ್ನು ಕಳಿಸಿ ಆ ಘರವಾಲಿ ಸೈನಿಕರನ್ನು ನಾನಾ ರೀತಿಯಾಗಿ ಹಿಂಸಿಸಿದರು ದೇಶಾಭಿಮಾನಿಗಳಾದ ಈ ಘರವಾಲಿ ಸೈನಿಕರನ್ನು ಜನರು ಮರೆಯಲಿಲ್ಲ ಅವರು ತಮ್ಮ ಕೃತಜ್ಞತೆಯನ್ನರ್ಪಿಸಿದರು

## ಸ್ತ್ರೀಯರ ಸಾಹಸ

ಈ ಹೋರಾಟದಲ್ಲಿ ಸ್ತ್ರೀಯರ ಸಾಹಸವೂ ವರ್ಣನಾತೀತವಾದುದು. ಸಭೆ ಮೆರವಣಿಗೆ, ಪಿಕೆಟಿಂಗ್ ವಿದೇಶಿ ವಸ್ತುಗಳ ಬಹಿಷ್ಕಾರ ಚಳವಳಿಗಳಲ್ಲಿ ಅವರ ಕೈಮೇಲು. ಶಾಲೆ ಕಾಲೇಜುಗಳಲ್ಲಿ ಕಲಿಯುತಿದ್ದ ತರುಣಿಯರೂ ಅಸಂಖ್ಯವಾಗಿ ಬಂದು ಈ ಹೋರಾಟದಲ್ಲಿ ಭಾಗವಹಿಸಿದರು. ಪುರುಷರಿಗಿಂತಲೂ ಅವರು ಹೆಚ್ಚಿನ ಧೈರ್ಯ ಸಾಹಸಗಳನ್ನು ಪ್ರದರ್ಶಿಸಿದ್ದರೆಂದರೆ ಅತ್ಯುಕ್ತಿಯುಲ್ಲ ಸಂಯುಕ್ತ ಪ್ರಾಂತದಲ್ಲಿ ಕಮಲಾ ಕೈಕೊಂಡ ಕಾರ್ಯವನ್ನು ಕೇಳಿ ಜವಾಹಿರಲಾಲರಿಗೂ ಆಶ್ಚರ್ಯವಾಯಿತಂತೆ ಕಮಲಾಳ ಆರೋಗ್ಯವು ಅಷ್ಟು ತೃಪ್ತಿಕರವಿಲ್ಲದಿದ್ದರೂ ಕೂಡಾ ಹಗಲಿರುಳು ಅವಳು ಸಂಘಟನೆಯ ಕಾಯದಲ್ಲಿ ಮಗ್ನಳಾಗಿದ್ದಳು. ಮೋತೀ

ಲಾಲರೂ ಮನಸೋಚ್ಚಿ ಹೋದರು. ಕಮಲಾಳೊಂದಿಗೆ ವಿಜಯಲಕ್ಷ್ಮಿ ಕೃಷ್ಣಾ ಕೂಡಾ ಭಾಗವಹಿಸಿದರು.

**ಮೋತಿಲಾಲರ ಅನಾರೋಗ್ಯ**

ಹತ್ತು ವರ್ಷಗಳಿಂದ ರಾಜಕೀಯ ರಂಗದಲ್ಲಿ ಹಗಲಿರುಳು ದುಡಿಯುತ್ತ ಬಂದ ಮೋತೀಲಾಲರ ಆರೋಗ್ಯವು ಕೆಡುತ್ತ ಬಂದಿತ್ತು. ದೇಹಕ್ಕೆ ಮೊದಲಿನ ಆಸ್ಥೈಕೆ ಇರಲಿಲ್ಲ ಸೆರೆಮನೆಯ ವಾಸವೂ ಅವರ ಮಾಂಸವನ್ನು ಕರಗಿಸಿತ್ತು ಸಂಪೂರ್ಣ ವಿಶ್ರಾಂತಿ ತೆಗೆದುಕೊಳ್ಳುವದು ಅವಶ್ಯವೆಂದು ಡಾಕ್ಟರರು ಒತ್ತಾಯಮಾಡಿದ್ದರು ಮುಸೋರಿ ಆರೋಗ್ಯಧಾಮಕ್ಕೆ ತೆರಳುವ ವಿಚಾರ ಅವರಿಗಿದ್ದಿತು ಆದರೆ ೧೯೩೦ ಜೂನ್ ತಿಂಗಳಲ್ಲಿ ಸರಕಾರವು ಅವರನ್ನು ಬಂಧಿಸಿತು. ಪುನಃ ಜೇಲುವಾಸದಿಂದ ಅವರ ಸ್ಥಿತಿ ಚಿಂತಾಜನಕವಾಯಿತು ಇದರಿಂದ ಗಾಬರಿಗೊಂಡ ಅಧಿಕಾರಿಗಳು ಅವರನ್ನು ಬಿಡುಗಡೆ ಮಾಡಿದರು. ಆರೋಗ್ಯ ಸುಧಾರಿಸಿಕೊಳ್ಳಲು ಮಕ್ಕಳೊಂದಿಗೆ ಮುಸೋರಿಗೂ ಅವರು ತೆರಳಿದರು ತಂದೆಯನ್ನು ಕಾಣಲು ಜವಾಹಿರಲಾಲರು ನೈನಿಜೇಲಿನಿಂದ ಬಂದಾಗ ಮೋತೀಲಾಲರು ಸ್ವಲ್ಪ ಗುಣಮುಖರಾಗಿದ್ದರು. ಆದರೆ ಎಂಟು ದಿವಸಗಳಮೇಲೆ ಪುನಃ ಅಧಿಕಾರಿಗಳು ಜವಾಹಿರಲಾಲರನ್ನು ಬಂಧಿಸಿದರು. ರಣಜಿತ್ ಪಂಡಿತರನ್ನು ಬಿಟ್ಟಿರಲಿಲ್ಲ. ಬಿಟ್ಟ ಮಗನನ್ನು ಮತ್ತೆ ಸೆರೆಹಿಡಿದುದರಿಂದ ಮೋತೀಲಾಲರಿಗೆ ಬಹಳ ದುಃಖವಾಯಿತು. ಮತ್ತೆ ಅವರು ಬಳಲತೊಡಗಿದರು.

## ೫. ತಂದೆ ಮೋತೀಲಾಲರ ಮರಣ

ಪಂಡಿತ ಜವಾಹಿರಲಾಲರನ್ನು ಪುನಃ ಬಂಧಿಸಿದುದರಿಂದ ಮೋತೀಲಾಲರಿಗೆ ದುಃಖ ಹೆಚ್ಚಿತು. ಮೊದಲೇ ಅವರ ದೇಹಾರೋಗ್ಯ ಚೆನ್ನಾಗಿರಲಿಲ್ಲ. ಜೇಲಿಗೆ ತೆರಳಿದಂದಿನಿಂದ ಮಲವಿಸರ್ಜನೆಯು ಕಾಲಕ್ಕೆ ರಕುತ ಬೀಳುತಿತ್ತು. ಅದರಿಂದ ನಿಶ್ಯಕ್ತಿ ದೇಹಕ್ಕೆ. ಈಗ ಶೋಕ ಭಾರವೊಂಡೆಡೆ ಆದರೆ ಅದೂ ಒಂದುಕ್ಷಣ. ಮರುಕ್ಷಣದಲ್ಲೇ ಸಿಂಹ ಧೈರ್ಯವನ್ನು ಪ್ರದರ್ಶಿಸುತಿದ್ದರು. "ನನಗೇನಾಗೀದೆ? ಏನೂ ಆಗಿಲ್ಲ" ಎಂದು ಪರರಿಗೇ ಧೈರ್ಯ ಹೇಳಲಾರಂಭಿಸಿದರು. ಎಲ್ಲರೂ ಸೆರೆಮನೆಗಳಲ್ಲಿದ್ದುದರಿಂದ ತಾವೇ ಸತ್ಯಾಗ್ರಹದ ಮಾರ್ಗದರ್ಶನ ಕೈಕೊಂಡರು ಜವಾಹಿರಲಾಲರ ಹುಟ್ಟುದಿನವನ್ನು "ರಾಷ್ಟ್ರೀಯ ದಿನ"ವನ್ನಾಗಿ ಆಚರಿಸಲು ನಿರ್ಧರಿಸಲಾಯಿತು. ಅವರ ಭಾಷಣ ಲೇಖನಗಳಲ್ಲಿದ್ದ ಆಕ್ಷೇಪಕಾರಕ ವಾಕ್ಯಗಳನ್ನು ಸಾರ್ವಜನಿಕ ಸಭೆಗಳಲ್ಲಿ ಓದಿ ಕಾಯಿದೆಯನ್ನುಲ್ಲಂಘಿಸಲೂ ಆಜ್ಞಾಪಿಸಿದರು ಅದೊಂದೇ ದಿನ ದೇಶದಾದ್ಯಂತ ೫ ಸಾವಿರ ಜನ ಬಂಧಿಸಲ್ಪಟ್ಟರು.

### ಕಲಕತ್ತಾ ನಗರದಲ್ಲಿ

ಅನಾರೋಗ್ಯವನ್ನು ಅಲಕ್ಷಿಸಿ ಮೋತೀಲಾಲರು ವಿಶೇಷ ಪರಿಶ್ರಮ ತೆಗೆದುಕೊಂಡುದುದರಿಂದ ಅದರ ದುಷ್ಪರಿಣಾಮವಾಗದೇ ಇರಲಿಲ್ಲ. ರಕುತ ವಿಸರ್ಜನೆ ವಿಶೇಷವಾಗತೊಡಗಿತು. ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ವಿಜಯಲಕ್ಷ್ಮಿ ಒತ್ತಾಯ ಮಾಡಲಾರಂಭಿಸಿದಳು ಯುರೋಪಿಗೆ ತೆರಳಲು ಜವಾಹಿರಲಾಲರು ಸೆರೆಮನೆಯಿಂದ ಹೇಳಿಕಳಿಸಿದರು ಆದರೆ ಕೊನೆಗೆ ಕಲಕತ್ತಾ ನಗರದ ನೆರೆಹೊರೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ನಿರ್ಣಯಿಸಿದರು. ವಿಜಯಲಕ್ಷ್ಮಿ ಅವರ ಸುಶ್ರೂಷೆ ಮಾಡುತಿದ್ದಳು. ಮೋತೀಲಾಲರು ಕಲಕತ್ತಾದಲ್ಲಿದ್ದಾಗಲೇ, ಅಲ್ಲಾಬಾದಿನಲ್ಲಿ ಕಮಲಾ ಬಂಧಿಸಲ್ಪಟ್ಟಳು. ಜವಾಹಿರಲಾಲರಿಗೆ ಅದರಿಂದ ಸಂತೋಷವಾದ

ಮೋತೀಲಾಲರಿಗೆ ದುಃಖವಾಯಿತು. ಏಕೆಂದರೆ, ಕಮಲಾಳ ಆರೋಗ್ಯ ತೃಪ್ತಿಕರವಾಗಲಿಲ್ಲ. ಆದುದರಿಂದ ಅವರು ಆನಂದ ಭವನಕ್ಕೆ ಓಡಿ ಬಂದರು

**ಜವಾಹಿರಲಾಲರ ಭಯ**

ಆನಂದಭವನಕ್ಕೆ ಬಂದ ಮೋತೀಲಾಲರು ಮಗನ ಭೆಟ್ಟಿಗಾಗಿ ನೈನಿ ಸೆರೆಮನೆಗೆ ತೆರಳಿದರು. ತಂದೆಯನ್ನು ಕಂಡ ಜವಾಹಿರಲಾಲರು ಭಯ ಪಟ್ಟರು ಅವರ ಮೋರೆ ಊದಿಕೊಂಡಿತ್ತು. ಕಣ್ಣುಗಳು ತೇಜೋಹೀನ ವಾಗಿದ್ದವು ಸಾವಿನಕಳೆ ಎಲ್ಲೋ ಒಂದೆಡೆ ಕುಣಿಯುತಿತ್ತು. ಜೇಲಿನಿಂದ ಮರಳಿದ ಅವರು ಹಾಸಿಗೆಯನ್ನೇ ಹಿಡಿದರು. ಹಾಗಿದ್ದರೂ ಸಾವು ಬಂದಿ ತೆಂದು ಯಾರೂ ಊಹಿಸಿರಲಿಲ್ಲ, ಸಾವಿಗೂ ಹೆದರದ ಧೀರವ್ಯಕ್ತಿ ಅವರು ಮೃತ್ಯುವಿನ ದವಡೆಯಿಂದ ಪಾರಾಗಬಹುದೆಂದು ಎಲ್ಲರ ಆಸೆ. ಆದರೆ ಅವರ ಪರಿಸ್ಥಿತಿ ಗಂಭೀರವಿದೆಯೆಂಬ ಕಾರಣದಿಂದ ೧೯೩೧ನೇ ಜನೆವರಿ ೨೬ನೇ ತಾರೀಖಿನ ದಿನ ಜವಾಹಿರಲಾಲರನ್ನು ಬಿಡುಗಡೆ ಮಾಡಿದಾಗ ಅವರ ಹಿಂದಿನ ಭಯ ಸತ್ಯವಾಗಿ ಪರಿಣಮಿಸಿತು.

**ಕೊನೆಯ ದರ್ಶನ**

ಮೋತೀಲಾಲರು ಬದುಕುವ ಲಕ್ಷಣವಿಲ್ಲವೆಂಬ ಸುದ್ದಿ ವ್ಯಾಪಿಸಿತು. ಎಲ್ಲ ಕಡೆಗಳಿಂದಲೂ ಅವರ ಕೊನೆಯ ದರ್ಶನ ಲಾಭಕ್ಕಾಗಿ ಕಾಂಗ್ರೆಸ್ಸಿಗರು ಬರತೊಡಗಿದರು. ಸೆರೆಮನೆಯಿಂದ ಬಿಡುಗಡೆ ಹೊಂದಿದ ಮುಖಂಡರು ಬಂಧುಗಳು ಆನಂದ ಭವನವನ್ನು ಮುತ್ತಿದರು. ಮೋತೀಲಾಲರನ್ನು ಒಂದು ಕುರ್ಚಿಯ ಮೇಲೆ ಕೂತುಕೊಳ್ಳಿಸಿದರು ಆ ಮೇಲೆ ಒಬ್ಬೊಬ್ಬರಂತೆ ಅವರ ದರ್ಶನ ಪಡೆದರು. ಕೆಲವರನ್ನು ಕಂಡು ಮುಗುಳು ನಕ್ಕರು. ಬಹಳ ಮಾತನಾಡಲು ಸಾಧ್ಯವಿದ್ದಿರಲಿಲ್ಲ. ಒಮ್ಮೊಮ್ಮೆ ಚೀಟಿಯಲ್ಲಿ ಏನನ್ನಾ ದರೂ ಬರೆದುಕೊಡುತಿದ್ದರು. ಹಗಲಿರುಳು ಮಕ್ಕಳು ಸರತಿಯಂತೆ ಅವರ ಬಳಿಯೇ ಇರುತಿದ್ದರು. ಎಲ್ಲಿ ನೋಡಿದರೂ ದುಃಖದ ಕಳೆಯೇ. ಆದರೆ ಮೋತೀಲಾಲರು ಮಾತ್ರ ದುಃಖ ಪಟ್ಟವರಂತೆ ಕಾಣಲಿಲ್ಲ. ಒಮ್ಮೊಮ್ಮೆ ಗಾಂಧೀಜಿಯವರೊಡನೆ ವಿನೋದದ ಮಾತುಗಳನ್ನಾಡುತಿದ್ದರು "ಗಾಧೀಜಿ

ನಾನು ಬೇಗನೇ ಹೋಗುತ್ತೇನೆ. ಸ್ವರಾಜ್ಯವನ್ನು ಕಾಣುವ ಯೋಗವಿಲ್ಲ. ಆದರೆ, ಅದನ್ನು ನೀವು ಸಂಪಾದಿಸಿರುವಿರಿ ಮತ್ತು ಬೇಗನೇ ಅದು ದೊರೆಯುವುದು ನಿಶ್ಚಿತ"ವೆಂದು ಗಾಂಧೀಜಿಯವರೊಡನೆ ನುಡಿದರು.

**ಲಖನೌ**

ಕ್ಷ—ಕಿರಣ ಪರೀಕ್ಷೆಗಾಗಿ ಮೋತೀಲಾಲರನ್ನು ಲಖನೌಗೆ ಕರೆದುಕೊಂಡು ಹೋದರು. ಅವರಿಗೆ ಅಂತ್ಯಾವಸ್ಥೆ. ಆದರೂ ಕೊನೆಯ ಪ್ರಯತ್ನ ನಡೆಸಲು ಎಲ್ಲರ ಆಶೆ. ಆದರೆ ಅಲ್ಲಿ ತೆರಳಿದ ಮೇಲೆ ಮೋತೀಲಾಲರಿಗೆ ಒಂದೆರಡು ಸಲ ಪ್ರಜ್ಞೆ ತಪ್ಪಿತು. ಗಾಂಧೀಜಿ, ಹಾಗೂ ಮೋತೀಲಾಲರ ಮಕ್ಕಳೆಲ್ಲ ಸೇವಾನಿರತರಾಗಿಯೇ ಇದ್ದರು. ಬಳಲಿದ್ದ ವಿಜಯಲಕ್ಷ್ಮಿ ಮತ್ತು ಕೃಷ್ಣಾ ತೂಕಡಿಸುತ್ತ ತೂಕಡಿಸುತ್ತ ನಿದ್ದೆ ಹೋದರು. ಜವಾಹಿರಲಾಲರು ಮತ್ತು ಅವರ ತಾಯಿ ಕಣ್ಣು ರೆಪ್ಪೆ ಮುಚ್ಚದೆ ಮೋತೀಲಾಲರ ಹಾಸಿಗೆಯ ಬಳಿ ಕುಳಿತಿದ್ದರು. ಫೆಬ್ರುವರಿ ಆರನೇ ತಾರೀಖಿನ ದಿನ ಮುಂಜಾನೆ ಒಮ್ಮೆಂದೊಮ್ಮೆಯೇ ಮೋರೆ ಶಾಂತವಾಗಿ ಕಂಡಿತು. ನಿದ್ದೆ ಹೋದರೆಂದು ಜವಾಹರರ ಕಲ್ಪನೆ. ಆದರೆ ಅವರ ತಾಯಿ ಮಾತ್ರ ಕೂಗಿದರು. "ನಿದ್ದೆ ಹೋಗಿರಬೇಕು. ಕೂಗಿ ಎಬ್ಬಿಸುತ್ತಿಯಾ?" ಎಂದು ತಾಯಿಗೆ ಜವಾಹರಲಾಲರು ಬೇಡಿಕೊಂಡರು. ಆದರೆ ಅದು ಚಿರನಿದ್ದೆಯೇ ಆಗಿತ್ತು. ತಾಯಿಯ ಕೂಗು ಕೇಳಿ ಬಂದ ಗಾಂಧೀಜಿ ಸತ್ಯ ಸಂಗತಿ ತಿಳಿಸಿದರು. ಮೋತೀಲಾಲರ ಹಾಸಿಗೆಯ ಬಳಿ ನಿಂತು ಪ್ರಾರ್ಥನೆ ಮಾಡಿ ಗಾಂಧೀಜಿ, ಜವಾಹಿರಲಾಲರ ತಾಯಿಯನ್ನು ಸಂತೈಸಲು ತೆರಳಿದರು. ಕ್ಷಣಾರ್ಧದಲ್ಲಿ ಕಲಾಕಾಂಕಾರ ಅರಮನೆಯ ಮುಂದೆ ಲಕ್ಷಗಟ್ಟಲೆ ಜನ ಕೂಡಿದರು. ಪುಷ್ಪಾಂಜಲಿಗಳಿಂದ ಅರಮನೆಯೇ ಮುಳುಗಿತು.

**ಅಂತ್ಯ ಸಂಸ್ಕಾರ**

ಮೋತೀಲಾಲರ ಭೌತಿಕ ಶರೀರವನ್ನು ಅಲ್ಲಾಬಾದಿಗೆ ತಂದರು. ರಣಜಿತ್ ಆ ಮೋಟಾರು ಕಾರನ್ನು ನಡೆಸುತ್ತ ಬಂದರು. ಮೋತೀಲಾಲರ ಹೆಂಡತಿಯೊಂದಿಗೆ ಗಾಂಧೀ ಬಂದರು. ಅವರ ಮೋಟಾರು ಕಾರು ಅಪಘಾತಕ್ಕೊಳಗಾಗಿ ತಲೆಕೆಳಗಾಗಿ ಉರುಳಿದರೂ ಯಾರಿಗೂ ಹಾನಿ ಸಂಭವಿಸಲಿಲ್ಲ. ಅವರ ಮೋಟಾರನ್ನು ನಡೆಸುತ್ತಿದ್ದ "ಡ್ರೈವರ್"

ಅಳುತ್ತಿದ್ದುದರಿಂದ, ರಸ್ತೆಯಲ್ಲಿದ್ದ ಹೊಂಡವನ್ನು ನೋಡಲಿಲ್ಲ. ಅವರೆಲ್ಲರೂ ಅಲ್ಲಾಬಾದಿಗೆ ಬಂದಾಗ ಅಲ್ಲಿ ಅಳುತ್ತಿದ್ದ ಜನರು ಲಕ್ಷಗಟ್ಟಲೆಯಾಗಿ ಕೂಡಿದ್ದರು. ಸುದ್ದಿ ಮೊದಲೇ ಜನರಿಗೆ ತಿಳಿದು ಹೋಗಿತ್ತು. ಅಂತಹ ಜನಜಾತ್ರೆ ಅಲ್ಲಾಬಾದಿನಲ್ಲಿ ಅಷ್ಟರ ವರೆಗೆ ನೆರೆದಿರಲಿಲ್ಲ. ರಾಜ ಮರ್ಯಾದೆಯಿಂದ ಸ್ಮಶಾನಯಾತ್ರೆಯೂ ಸಾಗಿತು. ಗಂಗಾನದಿಯ ದಂಡೆಯಲ್ಲಿ ಚಿತೆಯನ್ನು ಏರ್ಪಡಿಸಿದ್ದರು "ಭಾರತದ ಸ್ವಾತಂತ್ರ್ಯವೊಂದೇ ಮೋತೀಲಾಲರ ಜೀವನದುಸಿರಾಗಿತ್ತು. ಅದಕ್ಕಾಗಿಯೇ ಅವರು ತಮ್ಮ ಜೀವ ಜೀವನಗಳನ್ನರ್ಪಿಸಿದರು. ಆ ಮಹತ್ವದ ಉದ್ದೇಶ ಸಾಧನೆಗಾಗಿ ತಾವೂ ಹೋರಾಡುವೆವೆಂದು ಪ್ರತಿಯೊಬ್ಬ ಸ್ತ್ರೀ ಪುರುಷರು, ಗಂಗಾ ಯಮುನಾ ದಂಡೆಯ ಮೇಲಿರುವ ಅವರ ಕಳೇಬರದ ಮುಂದೆ ಪ್ರತಿಜ್ಞೆ ಮಾಡಲಿ" ಎಂದು ಗಾಂಧೀಜಿ ಚಿತೆಯ ಮುಂದೆ ನೆರೆದಿದ್ದ ಲಕ್ಷಗಟ್ಲೆ ಜನರನ್ನುದ್ದೇಶಿಸಿ ನುಡಿದರು ಚಿತೆಗೆ ಉರಿಹಚ್ಚಿದ ಬಳಿಕ ಜನರ ಕಣ್ಣೀರಿನ ಹೊಳೆ ಗಂಗೆಯೊಡನೆ ಸಂಗಮವಾಯಿತು. "ವಿಧವೆಗಿಂತಲೂ ನನ್ನ ಸ್ಥಿತಿ ಘೋರ. ವಿಧವೆಯಾದರೆ ಗಂಡನ ಸತ್ಕಾರ್ಯಗಳನ್ನೆಣಿಸಿ ಪುಣ್ಯ ಕಟ್ಟಿಕೊಳ್ಳಬಹುದು. ನಾನೇನು ಮಾಡಲಿ?" ಎಂದು ಗಾಂಧೀಜಿ ಕಂಬನಿಗರೆದರು.

## ಗಾಂಧಿ-ಇರ್ವಿನ್ ಒಪ್ಪಂದ

ಮೋತೀಲಾಲರ ಮರಣದ ತರುವಾಯ ಜವಾಹಿರಲಾಲರು ದಿಲ್ಲಿಗೆ ಪ್ರಯಾಣ ಬೆಳೆಸಿದರು. ಗಾಂಧೀಜಿಯವರಿಂದ ಅವರಿಗೆ ಕರೆ ಬಂದಿತ್ತು. ಆಗ್ಗೆ ವಾಯಿಸರಾಯರಾಗಿದ್ದ ಲಾರ್ಡ ಇರ್ವಿನ್‌ರವರೊಡನೆ ಗಾಂಧೀಜಿ ಸಂಧಾನದ ಮಾತುಕತೆ ನಡೆಸುತ್ತಿದ್ದರು. ಒಪ್ಪಂದವೂ ಆಯಿತು. ಆದರೆ ಅದರಿಂದ ಪರಿಸ್ಥಿತಿ ಸುಧಾರಿಸಲಿಲ್ಲ. ಅದೊಂದು ಬ್ರಿಟಿಶರ ಮಾಯಾ ಬಲೆ ದೇಶಾಭಿಮಾನಿಗಳ ಕಣ್ಣಿಗೆ ಮಣ್ಣೆರಚುವ ಪ್ರಯತ್ನ ಒಪ್ಪಂದದ ಕರಾರುಗಳನ್ನು ಸರಕಾರವೇ ಪಾಲಿಸಲಿಲ್ಲ ಸಂಯುಕ್ತಪ್ರಾಂತದಲ್ಲಿ ರೈತರ ಚಳವಳಿ ಪ್ರಬಲವಾಗಿತ್ತು. ಅದನ್ನು ಮೆಟ್ಟಲು ಸರಕಾರವು ಉಗ್ರೋಪಾಯಗಳನ್ನು ಕೈಕೊಂಡಿತು. ಇಂಥ ವಾತಾವರಣದಲ್ಲಿ ಏನು

ಮಾಡಬೇಕೆಂದು ನಿರ್ಧರಿಸಲು ಪ್ರಾಂತಿಕ ಪರಿಷತ್ತನ್ನು ಕೂಡಿಸಲು ನಿರ್ಧರಿಸಿದರು. ಆದರೆ ಗಾಂಧೀಜಿಯ ಸಲಹೆ ಸೂಚನೆಗಳನ್ನು ಕೇಳದೆ ಯಾವ ನಿರ್ಧಾರಕ್ಕೂ ಬರುವಂತಿರಲಿಲ್ಲ. ಗಾಂಧೀಜಿ ಎರಡನೆಯ ದುಂಡು ಮೇಜಿನ ಪರಿಷತ್ತಿಗಾಗಿ ಲಂಡನಿಗೆ ತೆರಳಿದ್ದರು. ಅವರು ಬರುವ ವರೆಗೆ ಪ್ರಾಂತಿಕ ಪರಿಷತ್ತನ್ನು ಮುಂದುವರಿಸಲಾಯಿತು. ಆದರೆ, ಗಾಂಧೀಜಿ ಹಿಂತಿರುಗುವುದರೊಳಗೆ ಮುಖಂಡರನ್ನು ಸರಕಾರವು ಬಂಧಿಸಿತು.

**ಪುನ: ಹೋರಾಟ**

ಗಾಂಧೀಜಿ ಬೇಗನೇ ಹಿಂತಿರುಗಿದರು. ಮುಂಬಯಿಯಲ್ಲಿ ತಮ್ಮನ್ನು ಭೆಟ್ಟಿಯಾಗಬೇಕೆಂದು ಜವಾಹಿರಲಾಲರಿಗೆ ತಿಳಿಸಿದ್ದರು. ಮುಂಬಯಿಗೆ ನೆಹರು ಪ್ರಯಾಣ ಮಾಡುತ್ತಿದ್ದಾಗಲೇ ಅವರನ್ನು ಸೆರೆ ಹಿಡಿಯಲಾಯಿತು. ಬ್ರಿಟಿಶರಿಗೆ ತಲೆಗೇರಿತ್ತು ಯುದ್ಧದ ಸೊಕ್ಕು. ಹೋರಾಟಕ್ಕೆ ದೇಶಾಭಿಮಾನಿ ಹಿಂದಿಯರೂ ಹಿಂಜರಿವವರಲ್ಲ. ಕಾಲು ಕೆದರಿ ಜಗಳ ತೆಗೆದವರು ಬ್ರಿಟಿಶರೇ. ಆದುದರಿಂದ ಬಡಿದಾಡದೆ ಬೇರೆ ಉಪಾಯವಿರಲಿಲ್ಲ. ಆದುದರಿಂದ ಮತ್ತೆ ದೇಶದಲ್ಲಿ ಹೋರಾಟ ಆರಂಭವಾಯ್ತು. ಗಾಂಧೀಜಿ ಸರದಾರ ಪಟೇಲ್ ಮೊದಲಾದ ಮುಖಂಡರೂ ಸೆರೆಮನೆ ಕಂಡರು. ಕಾಂಗ್ರೆಸ್ ಕಾರ್ಯಕರ್ತರೆಲ್ಲ ಪುನಃ ರಣಕಣದಲ್ಲಿ ಪ್ರವೇಶಿಸಿದರು. ಈ ಸಲ ಸತಿ ಮೋತಿಲಾಲರೂ ಮುಂದೆ ಬಂದರು. ಮೋತಿಲಾಲರು ಅಗಲಿದ ಮೇಲೆ ಆನಂದ ಭವನದಲ್ಲಿ ಜೀವವಿರಲಿಲ್ಲ. ವಯೋವೃದ್ಧೆಯಾಗಿದ್ದರೂ ಮನೆ ಮನೆಗೆ ತೆರಳಿ ಹೋರಾಟಕ್ಕೆ ಸ್ತ್ರೀಪುರುಷರನ್ನು ಹುರಿದುಂಬಿಸುತಿದ್ದರು.

**ಲಾಠೀ ಏಟು**

ಸಭೆ ಮೆರವಣಿಗೆ, ಹರತಾಳಗಳಲ್ಲಿ ಭಾಗವಹಿಸಕೂಡದೆಂದು ವಿಜಯಲಕ್ಷ್ಮಿಗೆ ಸರಕಾರದ ನೋಟೀಸು ಬಂತು. "ಸ್ವಾತಂತ್ರ್ಯದಿನ"ಕ್ಕೆ ಎರಡು ವಾರಗಳಿದ್ದುವು. ಅದು ಬಂದಾಗ. ಅದರೊಳಗೆ ಸೆರೆಮನೆಗೆ ತೆರಳಲು ವಿಜಯಲಕ್ಷ್ಮಿಗೆ ಇಷ್ಟವಿರಲಿಲ್ಲ. "ಸ್ವಾತಂತ್ರ್ಯ ದಿನ" ಮಹತ್ವದ ಸಭೆ ಕೂಡಿಸಿ ಕಾಯಿದೆಯನ್ನುಲ್ಲಂಘಿಸಿ ತೆರಳಲು ಅವಳ ಆಶೆ. ಅದಕ್ಕೆ ರಹಸ್ಯವಾಗಿ ಸಿದ್ಧತೆ ನಡೆಸಲಾರಂಭಿಸಿದಳು. "ಸ್ವಾತಂತ್ರ್ಯದಿನ" ಅಲ್ಲಾಬಾದ್ ಅಷ್ಟರವರೆಗೆ ಕಾಣದಂತಹ ಸಭೆ ಕಂಡಿತು. ಸತಿ ಮೋತೀಲಾಲರು ಸಭಾಧ್ಯಕ್ಷತೆ ವಹಿಸಿ

ದ್ದರು ಜನರು ಈ ಪ್ರಚಂಡ ಉತ್ಸವವನ್ನು ಕಾಣಲು ಸಾಧ್ಯವಾಗದೆ ಅಧಿಕಾರಿಗಳು ಮುಯ್ಯಿ ತೀರಿಸಿಕೊಳ್ಳಲೆತ್ನಿಸಿದರು. ಆ ಅನಂತ ಸಭೆಯ ಮೇಲೆ ಲಾಠೀ ಪ್ರಹಾರವನ್ನು ಆರಂಭಿಸಿದರು. ಅನೇಕರನ್ನು ಅಲ್ಲಿ ಸೆರೆಹಿಡಿಯಲಾಯಿತು ವಿಜಯ ಲಕ್ಷ್ಮೀ ಮತ್ತು ಕೃಷ್ಣಾ ಕೂಡಾ ಸಿದ್ಧರಾಗಿದ್ದರು ಆದರೆ ಅವರನ್ನು ಹಿಡಿಯಲಿಲ್ಲ. ಆದರಿಂದ ಅವರಿಗೆ ಸ್ವಲ್ಪ ನಿರಾಶೆಯೇ ಆಯಿತು.

**ಬಂಧನ**

ಮರುದಿನ ಮುಂಜಾನೆ ಆನಂದ ಭವನಕ್ಕೆ ಪೋಲೀಸ್ ಕಾರು ಬಂದು ಮುತ್ತಿಗೆ ಹಾಕಿತು ವಿಜಯಲಕ್ಷ್ಮೀ ಮತ್ತು ಕೃಷ್ಣಾ ಇಬ್ಬರನ್ನು ಬಂಧಿಸಲು ಪೋಲೀಸರು ಬಂದಿದ್ದರು. ಸೆರೆಮನೆಗೆ ತೆರಳಲು ಅವರಿಬ್ಬರೂ ಸಿದ್ಧರೇ ಅದರ ಬಗ್ಗೆ ಅವರು ಅಂಜುತಿದ್ದಿಲ್ಲ ಆದರೆ ಏಕಾಂಗಿಯಾಗಿ ವಾಸಿಸಬೇಕಾದ ತಮ್ಮ ತಾಯಿಯ ಬಗ್ಗೆ ಅವರು ಚಿಂತಾತುರರಾದರು. ಅರಮನೆಯಂತಹ ಆನಂದಭವನದಲ್ಲಿ ಅವರೊಬ್ಬರೇ ಬಾಳುವುದು ಕಠಿನ ಅವರ ಅಕ್ಕ ಕೂಡಾ ಇದ್ದರು ತಮಗೆ ಎಷ್ಟು ತೊಂದರೆಯಾದರೂ ಅದನ್ನು ನುಂಗಿಕೊಂಡು ಮಕ್ಕಳಿಗೇ ಅವರು ಧೈರ್ಯ ಹೇಳುತಿದ್ದರು ಧೈರ್ಯದಿಂದಲೇ ನೆಹರು ಹೆಣ್ಮಕ್ಕಳು ಜೇಲಿಗೆ ಪ್ರವೇಶಿಸಿದರು ಅಲ್ಲಿ ಇನ್ನಷ್ಟು ಹೆಣ್ಮಕ್ಕಳು ಕಲೆತಿದ್ದರು ಎಲ್ಲರನ್ನು ಒಂದೇ ಬರಾಕಿನಲ್ಲಿ ಹಾಕಿದ್ದರು. ಆ ಮೇಲೆ ಮೂರು ನಾಲ್ಕು ಜನರಿಗೊಂದು ಪ್ರತ್ಯೇಕ ಕೊಠಡಿಗಳನ್ನು ಕೊಟ್ಟರು ವಿಚಾರಣೆ ನಡೆದು ಅಕ್ಕ-ತಂಗಿಗೆ ಒಂದೊಂದು ವರುಷ ಶಿಕ್ಷೆ ವಿಧಿಸಲ್ಪಟ್ಟಿತು. ಶಿಕ್ಷೆಯನ್ನನುಭವಿಸಲು ಲಖನೌ ಸೆರೆಮನೆಗೆ ಕಳಿಸಿದರು

**ಸೆರೆಮನೆಗಳು**

ಅಂದಿನ ಕಾಲದಲ್ಲಿ ಸೆರೆಮನೆಗಳ ಸ್ಥಿತಿ ಶೋಚನೀಯ ಜೀವ ಹಿಂಡುವ ಮೃತ್ಯು-ಪಂಜರಗಳಂತಿದ್ದುವು ಸಂಜೆ ಐದು ಗಂಟೆಗೇ ಕೊಠಡಿಗಳ ಬಾಗಿಲುಗಳನ್ನು ಮುಚ್ಚಿ ಕೀಲಿ ಹಾಕುವರು ಆ ಮೇಲೆ ತೆಗೆಯುವುದು ಮುಂಜಾನೆಯೇ ಸರಿ ಅಷ್ಟರವರೆಗೆ ವಾಚ್‌ಮನ್, ವಾರ್ಡರರ ವಕ್ರ ದೃಷ್ಟಿಯ ನೆರಳಿನಲ್ಲೇ ಕೈದಿಗಳು ಜೀವಿಸಬೇಕು ಸ್ತ್ರೀ ರಾಜಕೀಯ ಕೈದಿಗಳ ಮೇಲೂ ಈ ಸ್ತ್ರೀ ವಾರ್ಡರರ ಅಧಿಕಾರ! ಆ ಸ್ತ್ರೀ ವಾರ್ಡರರಾದರೂ ಒರಟು ಜೀವಿಗಳು ಕೊಠಡಿಗಳಲ್ಲಿ ನೈರ್ಮಲ್ಯವೂ ಇರಲಿಲ್ಲ ನಾನಾ

ಕ್ರಿಮಿಕೀಟಗಳು ಹರಿದು ಬರುತ್ತಿದ್ದುವು ಒಮ್ಮೊಮ್ಮೆ ಅವು ಕಾಲಿನ ಮೇಲೆ
ಹರಿಯುತ್ತಿದ್ದುದೂ ಉಂಟು ಅದರಿಂದ ಹೆಣ್ಮಕ್ಕಳ ಗಾಬರಿ ಹೇಳತೀರದು
ತಗಣೆ, ಕೂರಿ (ಜೇಲಿನ ಬಿಳಿ ಹೇನು)ಗಳ ಕಾಟವಂತೂ ಬಹಳ. ಊಟದ
ವ್ಯವಸ್ಥೆಯಂತೂ "ನಳಪಾಕ" ದ ವ್ಯವಸ್ಥೆ ಮನುಷ್ಯರು ತಿನ್ನಲು ತೀರ
ಅಯೋಗ್ಯ ಅದಕ್ಕೆ ಉಪ್ಪು ಹುಳಿ ಖಾರ ಯಾವುದೂ ಇಲ್ಲ ಅಥವಾ
ಎಲ್ಲವನ್ನೂ ಬೆರಸಿದ ಅಥವಾ ಯಾವುದಾರೊಂದನ್ನು ಹಾಕಿದ ಪದಾರ್ಥ.
ಅದನ್ನು ತಿನ್ನಲಾರದೆ ಸ್ವಂತ ಅಡಿಗೆ ಮಾಡಲು ಅಕ್ಕ-ತಂಗಿ ನಿರ್ಧರಿಸಿದರು
ಅವರ ಬರಾಕಿನಲ್ಲಿದ್ದ ಇನ್ನಿತರ ಹುಡುಗಿಯರೂ ಸಹಕರಿಸಿದರು. ಕೆಲಸ
ಹಂಚಿಕೊಂಡು ಅಡಿಗೆ ಮಾಡಲು ಆರಂಭಿಸಿದ ಮೇಲೆ ಸ್ವಲ್ಪ ನಾಲಿಗೆ ರುಚಿ
ಸಿಕ್ಕಿತು ಅವರಿಗೆ

## ಕ್ರಿಮಿನಲ್ ಕೈದಿಗಳು

ರಾಜಕೀಯ ಕೈದಿಗಳೊಂದಿಗೆ ಕೆಲವು ಕ್ರಿಮಿನಲ್ ಕೈದಿಗಳನ್ನು ಇಟ್ಟಿ
ದ್ದರು ಇದಲ್ಲದೆ ಸ್ತ್ರೀ ಕೈದಿಗಳನ್ನೊಳಗೊಂಡ ಪ್ರತ್ಯೇಕ ಬರಾಕುಗಳೂ
ಇದ್ದುವು ಕೊಲೆ, ಕಳವು ಮೊದಲಾದ ನಾನಾ ಅಪರಾಧಗಳಿಗಾಗಿ ಅವರು
ಶಿಕ್ಷೆಯನ್ನನುಭವಿಸುತ್ತಿದ್ದರು ಕೆಲವರಿಗಂತೂ ದೀರ್ಘಕಾಲದ ಶಿಕ್ಷಾವಧಿ
ಮುಂಜಾನೆಯಿಂದ ಸಂಜೆಯವರೆಗೂ ಅವರಿಗೆ ದುಡಿತ ವಾರ್ಡರ್, ವಾಚ್
ಮನ್‌ಗಳ ದರ್ಪ ಬೇರೆ ಅವರಲ್ಲಿ ಅನೇಕರು ನಾನಾ ರೋಗಗಳಿಂದ ಬಳ
ಲುತ್ತಿದ್ದರು ಅವನ್ನು ಗುಣಪಡಿಸಲು ವೈದ್ಯಕೀಯ ವ್ಯವಸ್ಥೆ ಜೇಲಿನಲ್ಲಿ
ತೃಪ್ತಿಕರವಾಗಿರಲಿಲ್ಲ ಡಾಕ್ಟರರು ವಾರಕ್ಕೊಮ್ಮೆ ಬಂದರೂ ಪರೀಕ್ಷೆ ಮಾಡು
ವುದು ಹೆಸರಿಗೆ ಮಾತ್ರ ಬಂಧುಗಳ ಭೆಟ್ಟಿ, ಪತ್ರವ್ಯವಹಾರಗಳಿಗೂ ಅವ
ರಿಗೆ ರಾಜಕೀಯ ಕೈದಿಗಳಷ್ಟು ಸೌಕರ್ಯಗಳಿರುತ್ತಿದ್ದಿಲ್ಲ. ಇದರಿಂದ ಅವರೆ
ಲ್ಲರೂ ಬೇಸರದಿಂದ ದಿನ ದೂಡುತ್ತಿದ್ದರು ಯಂತ್ರದಂತೆ ರಾಜಕೀಯ ಕೈದಿ
ಗಳು ಬಂದರೆ ಅವರಿಗೆ ಬಹಳ ಸಂತೋಷ. ಏಕೆಂದರೆ, ಅದರಿಂದ ಜೇಲಿನ
ಕಠೋರ ಕಾಯದೆ ನಿಯಮಗಳು ಅವರ ಮಟ್ಟಿಗೂ ಸಡಿಲವಾಗುತ್ತಿತ್ತು.
ರಾಜಕೀಯ ಕೈದಿಗಳನ್ನು ಆಳುವುವರಲ್ಲೇ ಜೇಲಧಿಕಾರಿಗಳ ಕಾಲ, ಬುದ್ಧಿ,
ಸಾಮರ್ಥ್ಯ ಇಂಗುತ್ತಿತ್ತು. ಇದಲ್ಲದೆ ರಾಜಕೀಯ ಕೈದಿಗಳು ಕ್ರಿಮಿನಲ್

ಕೈದಿಗಳನ್ನು ಭೆಟ್ಟಿಯಾಗುತ್ತಿದ್ದರು. ಕ್ರಿಮಿನಲ್ ಕೈದಿಗಳ ಮೇಲೆ ಅವರಿಗೆ ಸಹಾನುಭೂತಿ. ಅವರಿಗೆ ಸಾಬೂನು ಎಣ್ಣೆ, ಪುಸ್ತಕಗಳನ್ನು ಕೊಡಲು ಮನಸ್ಸಾಗುತ್ತದೆ.

## ಪುಸ್ತಕಗಳು

ಜೇಲಿನಲ್ಲಿ ಪುಸ್ತಕಗಳನ್ನು ದೊರಕಿಸುವದೆಂದರೆ ಒಂದು "ಅಶ್ವಮೇಧಯಾಗ" ಮಾಡಿದಂತೆಯೇ. ಕೊಡುವುದೇ ಕಷ್ಟ. ಕೊಟ್ಟರೂ ಅಧಿಕಾರಿಗಳು ಆರಿಸಿ, ಹಾರಿಸಿ, ಕೊಡುತ್ತಿದ್ದರು. ರಾಜಕೀಯ ಗ್ರಂಥಗಳಿಗೆ ಅವಕಾಶವೇ ಇಲ್ಲ. ಇನ್ನಿತರ ಪುಸ್ತಕಗಳಿದ್ದರೂ ಎಷ್ಟೋ ಆನಂದವಾಗುತ್ತದೆ. ಸುಪರಿಂಟೆಂಡೆಂಟ್ ಪ್ರತಿ ಸೋಮವಾರ ಬಂದಾಗ ತಕರಾರು ಕೇಳುವುದೊಂದು ರೂಢಿ. ವಿಜಯಲಕ್ಷ್ಮಿ ಹೆಚ್ಚು ಮಾತನಾಡುತ್ತಿದ್ದಿಲ್ಲ. ಲಜ್ಜೆಯೂ ಬಹಳ. ಕೃಷ್ಣಾ "ಕೈ ಬಾಯಲ್ಲಿ" ಯಾರಿಗೂ ಬಿಟ್ಟು ಕೊಡುತ್ತಿದ್ದಿಲ್ಲ. ಸಿಟ್ಟಂತೂ ಮೂಗಿನ ಮೇಲೆಯೇ ಅವಳಿಗೆ ವಾದಕ್ಕೆ ಪ್ರತಿವಾದ. ವಿವಾದವಿದ್ದರೆ ಅದಕ್ಕೂ ಸಿದ್ಧ. ಯಾರಿಗೂ ಅಂಜುತ್ತಿದ್ದಿಲ್ಲ. ಯಾರ ಹಂಗೂ ಇಲ್ಲ. ಆದುದರಿಂದ, ಫ್ರೆಂಚ್, ಇಟಾಲಿಯನ್ ಗ್ರಂಥಗಳೂ ಕಾದಂಬರಿ, ನಿಂಘಂಟುಗಳೂ ಬೇಕೆಂದು ಸುಪರಿಟೆಂಡೆಂಟ್ ಬಂದಾಗ ತಕರಾರು ಅರ್ಜಿ ಮುಂದಿಟ್ಟಳು. ಅವಳ ಬೇಡಿಕೆಯ ಪಟ್ಟಿ ಹನುಮಂತನ ಬಾಲವೇ. ಅದನ್ನು ನೋಡಿ ಸುಪರಿಂಟೆಂಡಂಟನ ಕಣ್ಣುಗಳು ದೊಡ್ಡದಾದುವು. "ನಿಮಗೊಂದು ಲೈಬ್ರರಿಯೇ ಬೇಕು. ಅದರ ವ್ಯವಸ್ಥೆಯನ್ನೇ ಮಾಡಿದರೆ ಹಿತವಾದೀತಲ್ಲ! ಬೇಕಾದ ಪುಸ್ತಕಗಳನ್ನು ಆರಿಸಿಕೊಳ್ಳಬಹುದು" ಎಂದು ವ್ಯಂಗ್ಯವಾಗಿ ನುಡಿದ. ಅವಳ ಪ್ರತ್ಯುತ್ತರವೂ ನಾಲಿಗೆಯ ತುದಿಯಲ್ಲಿತ್ತು. "ಹಾಗೆ ಮಾಡಿದರೆ ಭಾರೀ ಒಳ್ಳೆಯದು. ನಿಮಗೆ ತ್ರಾಸವಾದೀತು, ಪಾಪ. ಆದರೆ ಹಗ್ಗ ಹುರಿತೊಸೆದ. ಸುಮ್ಮನೆ ಸಮಯ ಹಾಳುಮಾಡಲು ನನಗೂ ಇಷ್ಟವಿಲ್ಲ" ಎಂದಳು. ಲೈಬ್ರರಿ ತೆರೆವ ಮಾತಂತಿರಲಿ, ಅವಳು ಕೇಳಿದ ಪುಸ್ತಕಗಳನ್ನು ಕೊಡಲು ಸರಕಾರಕ್ಕೆ ಎರಡು ತಿಂಗಳು ಬೇಕಾಯ್ತು. "ಗಂಭೀರ" ಪರ್ಯಾಲೋಚನೆಗೆ ಅಷ್ಟು ಅವಧಿ ಬೇಡವೇ?

**ಹಾಡು ಮತ್ತು ಕುಣಿತ**

ಜೇಲಿನಲ್ಲಿ ರಾಜಕೀಯ ಕೈದಿಗಳಿಗೂ ಬೇಸರವಾಗುವುದು ಸಹಜ ಬಂಧು, ಮಿತ್ರರ ಸ್ನೇಹ ಸಹವಾಸಗಳಿಗಾಗಿ ಮನಸ್ಸು ಸದಾ ಕಾತರ ಪಡುವುದು. ಸತಿಪತಿ, ತಾಯಿ ಮಕ್ಕಳನ್ನು ಒಂದೇ ಬರಾಕಿನಲ್ಲಿಡುವುದು ಜೇಲಿನ ನಿಯಮವಲ್ಲ ಹೊರಗಿರುವ ಬಂಧು ಬಳಗದವರು ಬಂದು ಭೆಟ್ಟಿಯಾಗಲು ಮಾತ್ರ ಅವಕಾಶವಿದೆ ವಿಜಯಲಕ್ಷ್ಮಿಯ ಪತಿ ರಣಜಿತ್ ಬೇರೆ ಸೆರೆಮನೆಯಲ್ಲಿದ್ದಾರೆ. ಅಣ್ಣನೂ ಅಷ್ಟೇ ಹೊರಗೆ ಉಳಿದವಳು ತಾಯಿ ಮಾತ್ರ. ಜವಾಹಿರಲಾಲ್, ರಣಜಿತ್, ವಿಜಯ ಲಕ್ಷ್ಮಿಯವರನ್ನು ತಾಯಿ ಮಾತ್ರ ಸರ್ತಿಗೆ ಸರಿಯಾಗಿ ಬಂದು ಭೆಟ್ಟಿಯಾಗುತಿದ್ದರು. ಭೆಟ್ಟಿಯಾದಾಗ ಪರಮ ಸಂತೋಷ ಆದರೆ, ಕೆಲವು ನಿಮಿಷಗಳಾದ ಮೇಲೆ ಜೋಲು ಮೋರೆ ಮಾಡಿಕೊಂಡು ಪುನಃ ತಂತಮ್ಮ ಕೋಣೆಗೆ ಹಿಂತಿರುಗಬೇಕು. ಕೋಣೆಯಲ್ಲಿರುವ ಸ್ನೇಹಿತರೇ ಪರಮ ಮಿತ್ರರೂ ಹತ್ತಿರದ ಬಂಧುಗಳೂ ಆಗಿ ಪರಿಣಮಿಸುತ್ತಾರೆ. ವಿಜಯಲಕ್ಷ್ಮಿ ಮತ್ತು ಕೃಷ್ಣಾ ಕೂಡಾ ಬರಾಕಿನಲ್ಲಿದ್ದ ಇನ್ನಿತರ ಸ್ತ್ರೀ ಕೈದಿಗಳೊಡನೆ ಸ್ನೇಹ ಬೆಳಸಿ ಕೊಂಡರು. ಹಗಲು ಹೊತ್ತು ಬೇರೆ ಬರಾಕುಗಳಿಗೆ ತೆರಳಿ ಇನ್ನಿತರ ಕ್ರಿಮಿನಲ್ ಸ್ತ್ರೀ ಕೈದಿಗಳ ಸ್ನೇಹವನ್ನೂ ಸಂಪಾದಿಸಿದರು. ಅವರಲ್ಲಿ ಅನೇಕರು ಎಳೆವಯಸ್ಸಿನವರು. ಅನೇಕರು ಸ್ವರೂಪಿಗಳಾಗಿದ್ದರು. ಕೆಲವರಿಗೆ ಸಂಗೀತವೂ ಬರುತಿತ್ತು ಒಬ್ಬಳು ಶಾಸ್ತ್ರೀಯವಾಗಿ ಹಾಡುತಿದ್ದಳು ಅವಳ ಕಂಠವೂ ಬಹಳ ಮಧುರ. ಇನ್ನೊಬ್ಬಳು ರತಿಯಂತೆ ನರ್ತಿಸುತಿದ್ದಳು ನರ್ತನ ಕಲೆಯಲ್ಲಿ ತಜ್ಞಳಾಗಿದ್ದಳು. ಗಾಯನ ನರ್ತನಗಳಿಂದ ಜೇಲಿನ ಕಠೋರ ಜೀವನ ಸ್ವಲ್ಪ ಸಮಯದ ವರೆಗೆ ಮಧುರವಾಗುತಿತ್ತು

**ಬಿಡುಗಡೆ**

ಒಂದು ವರುಷದ ಮೇಲೆ ವಿಜಯಲಕ್ಷ್ಮಿ ಮತ್ತು ಕೃಷ್ಣಾ ಬಿಡುಗಡೆ ಮಾಡಲ್ಪಟ್ಟರು. ಆನಂದ ಭವನದ ವರೆಗೆ ತಂದು ಅವರನ್ನು ಬಿಟ್ಟು ಹೋದರು ಆದರೆ, ಆನಂದ ಭವನಕ್ಕೆ ಬೀಗ ಹಾಕಿತ್ತು. ಕಮಲಾಳ ಆರೋಗ್ಯ ಸುಖಮಯವಾಗಿರಲಿಲ್ಲ. ಆದುದರಿಂದ ವಿಶ್ರಾಂತಿಗೆಂದು ಅವಳನ್ನು ಕಲಕತ್ತಾಕ್ಕೆ ಕರೆದೊಯ್ದಿದ್ದರು ಸೊಸೆಯನ್ನು ಕಾಣಲು ಸ್ವರೂಪ

ರಾಣಿ ನೆಹರು ಕೂಡಾ ತೆರಳಿದ್ದರು. ಆದುದರಿಂದ ಅವರಿಬ್ಬರೂ ಕಲಕತ್ತೆಗೆ ಪ್ರಯಾಣ ಮಾಡಬೇಕಾಯ್ತು. ಕಲಕತ್ತಾ ನಗರದಿಂದ ಮರಳಿದ ಮೇಲೆ ಮಕ್ಕಳನ್ನು ಕಾಣಲು ವಿಜಯಲಕ್ಷ್ಮಿಗೆ ಆತುರ. ಅವಳ ಮೂರು ಮಕ್ಕಳನ್ನು ಪುಣೆಯಲ್ಲಿ ಕಲಿಯಲು ಕಳಿಸಿಕೊಟ್ಟಿದ್ದರು. ಕೊನೆಯ ಮಗುವಿಗೆ ಕೇವಲ ಮೂರು ವರುಷ ಮಾತ್ರ. ಈ ಚಿಕ್ಕ ಮಗುವನ್ನು ಅಗಲಿ ವಿಜಯಲಕ್ಷ್ಮಿ ಸೆರೆಮನೆಯಲ್ಲಿ ಒಂದು ವರುಷದ ವರೆಗೆ ಇರಬೇಕಾಗಿತ್ತು. ಪುಣೆಯ ಯೆರವಾಡಾ ಜೇಲಿನಲ್ಲಿ ಗಾಂಧೀಜಿ ಕೂಡಾ ಇದ್ದರು. ಮಕ್ಕಳನ್ನು ನೋಡಲು ಬಂದ ಅಕ್ಕ ವಿಜಯಲಕ್ಷ್ಮಿ ತಂಗಿಯೊಂದಿಗೆ ಗಾಂಧೀಜಿಯವರನ್ನು ಭೆಟ್ಟಿಯಾದಳು. ಆ ಮೇಲೆ ಮಕ್ಕಳನ್ನು ಕರೆದುಕೊಂಡು ಮುಂಬಯಿಗೆ ತೆರಳಿದಳು.

**ರಾಜಾ**

ಮುಂಬಯಿಯೊಳಗಿದ್ದಾಗ ಕೃಷ್ಣಾ "ರಾಜಾ"ನನ್ನು ಭೆಟ್ಟಿಯಾದಳು. ಒಂದು ಚಹಾ ಸತ್ಕಾರ ಕೂಟ ಸಮಾರಂಭದಲ್ಲಿ ಮೊದಲು ಕಂಡುದಾದ. ಕೃಷ್ಣಾ ಆ ಸಮಾರಂಭಕ್ಕೆ ಬಂದೊಡನೆಯೇ "ರಾಜಾ" ದೃಷ್ಟಿಗೆ ಬಿದ್ದ. ಅವನ ಕಡೆ ಅವಳ ಮನಸ್ಸು ಸ್ವಲ್ಪ ಆಕರ್ಷಿಸಲ್ಪಟ್ಟಿತು. ಇನ್ನಿತರರಿಗಿಂತ ರಾಜಾ ಭಿನ್ನವಾಗಿ ತೋರಿದ. ದೊಡ್ಡಸ್ತನದ ಅವನ ನಗೆನುಡಿಯೂ ಮೋಹಕ. ಆದರೆ ರಾಜಾ ಅವರೊಡನೆ ಹೆಚ್ಚು ಮಾತನಾಡಲಿಲ್ಲ. ಅವನು ಶಾಂತ ಹಾಗೂ ಗಂಭೀರವಾಗಿಯೇ ಕುಳಿತಿದ್ದ. ಕೃಷ್ಣಾ ತಲೆಯಿಂದ ಕಾಲಿನ ವರೆಗೂ ಅವನನ್ನು ನಿರೀಕ್ಷಿಸಿದಳು. ಅವನ ಕೈ ಬೆರಳುಗಳು ಇನ್ನಷ್ಟು ಸುಂದರವಾಗಿದ್ದುವು. ಬೆರಳುಗಳನ್ನು ಕಂಡು ಜನರ ಗುಣಗಳನ್ನು ನಿರ್ಣಯಿಸುವವರೂ ಉಂಟು. ರಾಜನ ಬೆರಳುಗಳು ಬಹಳ ಕಲಾತ್ಮಕ ಮತ್ತು ನಯನ ಮನೋಹರವಾಗಿದ್ದುವು. ಕೃಷ್ಣಾ ಸೋತಳು. ಆದರೆ ತನ್ನ ಇಂಗಿತವನ್ನು ಯಾರಿಗೂ ತಿಳಿಸಲಿಲ್ಲ. ಒಂದೆರಡು ತಿಂಗಳುಗಳ ಮೇಲೆ ಅಹ್ಮದಾಬಾದ್ ನಗರಕ್ಕೆ ತೆರಳಿದಾಗ ಪುನಃ ಅವರಿಗೆ ರಾಜಾನ ದರ್ಶನವಾಯಿತು. ಕೃಷ್ಣಾ ಪ್ರಣಯದುರಿಯಿಂದ ಕರಗಿದಳು. ತನ್ನ ದುರವಸ್ಥೆಯನ್ನು ವಿಜಯಲಕ್ಷ್ಮಿಗೆ ತಿಳಿಸಿ, ತಾನು ಅವನನ್ನು ಮದುವೆಯಾಗುವುದಾಗಿ ತಿಳಿಸಿದಳು. ಪ್ರಕೃತ ಈ ರಹಸ್ಯವನ್ನು ಯಾರಿಗೂ

ತಿಳಿಸಬಾರದೆಂದು ಬೇಡಿಕೊಂಡಳು. ಏಕೆಂದರೆ, ಆಗ, ಅವರ ತಾಯಿಯ ದೇಹಸ್ಥಿತಿ ಚೆನ್ನಾಗಿರಲಿಲ್ಲ ಸ್ವರೂಪರಾಣಿ ಗುಣಮುಖರಾದಮೇಲೆ. ಜವಾಹಿರಲಾಲರಿಗೆ ಈ ವಿಷಯವನ್ನು ತಿಳಿಸಬೇಕೆಂದು ಕೃಷ್ಣಾ ಅಕ್ಕನ ಮನವೊಲಿಸಿದಳು ತನಗೆ ಬೇಕಾದ ಗಂಡನನ್ನು ವರಿಸಲು ಅವರ ಅಡ್ಡಿಯಿರಲಿಲ್ಲ. ಆದರೆ "ರಾಜಾ, ರಾಜಾ, ರಾಜಾ" ಎಂದಷ್ಟೇ ಕೃಷ್ಣಾಗೂ ಗೊತ್ತು. ಅವನ ವಿಷಯ ಬೇರೇನೂ ತಿಳಿದಿರಲಿಲ್ಲ. ಕೊನೆಗೆ ಜವಾಹಿರಲಾಲರು ಮುಂಬಯಿಗೆ ತೆರಳಿ "ರಾಜಾ"ನನ್ನು ಕಂಡರು.

**ರಾಜಾನ ಜಾತಕ**

'ರಾಜಾ'ನ ಪೂರ್ಣ ಹೆಸರು ಗುಣೋತ್ತಮ ಹತೀಸಿಂಗ್. ಗುಜರಾತಿ, ಗುಜರಾತದ ಅವನ ಮನೆತನವೂ ದೊಡ್ಡದು. ಅವನ ಮನೆತನದ ಹಿರಿಯರೆಲ್ಲ ಬ್ರಿಟಿಶರೊಡನೆ ನೂರಾರು ವರುಷಗಳಿಂದ ಹೋರಾಡಿದವರು. ಅವನ ಅಜ್ಜ ಅಹ್ಮದಾಬಾದಿನಲ್ಲಿ 'ಹತೀಸಿಂಗ್ ದೇವಸ್ಥಾನ'ವನ್ನು ಕಟ್ಟಿಸಿರುವರು ಈ ಜೈನ ಗುಡಿಯ ಕೆತ್ತನೆ ಕೆಲಸಗಳು ಮನೋಹರವಾಗಿವೆ. ಅಹ್ಮದಾಬಾದ್ ನಗರಕ್ಕೇ ಅದು ದೊಡ್ಡ ಶೋಭೆ. ರಾಜಾ "ಆಕ್ಸ್‌ಫರ್ಡ್" ವಿಶ್ವವಿದ್ಯಾಲಯದಲ್ಲಿ ಕಲಿತವನು ಆ ಮೇಲೆ ಬರ್ಲಿನ್ ಮತ್ತು ಪ್ಯಾರಿಸ್ ವಿಶ್ವವಿದ್ಯಾಲಯಗಳಲ್ಲಿ ಮತ್ತೆ ಉಚ್ಚ ಶಿಕ್ಷಣ ಪಡೆದವನು ೧೯೩೨ರಲ್ಲಿ ಸ್ವದೇಶಕ್ಕೆ ಮರಳಿ ವಕೀಲಿ ವೃತ್ತಿ ಆರಂಭಿಸಿದ್ದನೇನೋ ನಿಜ ಆದರೆ ೧೯೨೦ರಿಂದಲೂ ಮನಸ್ಸು ರಾಜಕಾರಣದ ಕಡೆ. ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಕಾಂಗ್ರೆಸ್ಸಿಗನಾಗಿ ದುಡಿಯುತ್ತ ಬಂದವ. ಮುಂಬಯಿ ಪ್ರಾಂತಿಕ ಕಾಂಗ್ರೆಸ್ಸಿನ ಸದಸ್ಯ ಆ ಮೇಲೆ, ಚೀನಾ ಶುಶ್ರೂಷಾಪಥಕ, ಸ್ಪಾನಿಶ್ ಸಹಾಯಕ ಸಮಿತಿ, ರಾಷ್ಟ್ರೀಯ ಯೋಜನಾ ಸಮಿತಿಗಳ ಕಾರ್ಯದರ್ಶಿಯಾಗಿ ಹಗಲಿರುಳು ಶ್ರಮಿಸಿದ ಉತ್ಸಾಹೀ ತರುಣ ಇದನ್ನರಿತ ಜವಾಹಿರಲಾಲರು ಗಾಂಧೀಜಿಯವರನ್ನು ಭೆಟ್ಟಿಯಾಗಿ ಈ ವಿವರಗಳನ್ನೆಲ್ಲ ತಿಳಿಸಿದರು ಗಾಂಧೀಜಿಯವರಿಗೆ ರಾಜಾನ ಮನೆತನದ ಆದ್ಯಂತ ಇತಿಹಾಸವೆಲ್ಲ ಗೊತ್ತು. ಆದುದರಿಂದ ಮದುವೆಗೆ ಅವರು ಒಪ್ಪಿದರು. ೧೯೩೩ ನೇ ಅಕ್ಟೋಬರ್ ೨೦ ನೇ ದಿನ "ರಾಜಾ" ಆನಂದಭವನದಲ್ಲಿ "ರಾಣಿ"ಗೆ ಮಾಲೆ ಹಾಕಿದ

**ಗಾಂಧೀಜಿಯ ಆಶೀರ್ವಾದ**

ವಿಜಯಲಕ್ಷ್ಮಿಯ ಮದುವೆಗೆ ಮಹದೇವ ದೇಸಾಯಿ ಕಾರಣ. ಗಾಂಧೀಜಿಯವರ ಕೈಕೂಡಾ ಅದರಲ್ಲಿರಬೇಕೆಂದು ಅನೇಕರ ಊಹೆ. ಅದೇನಿದ್ದರೂ ಅವರ ಒಪ್ಪಿಗೆಯಿಂದಲೇ ಆ ಮದುವೆಯಾಗಿತ್ತು. ಕೃಷ್ಣಾಳ ಮದುವೆಗೂ ಗಾಂಧೀಜಿಯವರದೇ ಆಶೀರ್ವಾದ ಲಗ್ನದ ಕಾಲಕ್ಕೆ ಗಾಂಧೀಜಿ ಕೃಷ್ಣಾಳಿಗೆ ಪತ್ರ ಬರೆದು ಆಶೀರ್ವಾದವಿತ್ತರು. "......ಮದುವೆಯೆಂದರೆ ಪುನರ್ಜನ್ಮವಲ್ಲವೇ ? ನಿನಗೂ ಈಗ ಪುನರ್ಜನ್ಮ ನೋಡು. ನಿನ್ನ ಅಕ್ಕ ಕಾಶ್ಮೀರಕ್ಕೆ ವಧುವಾಗಿ ಬಂದಳು. ಆದರೆ, ಗಂಡನನ್ನು ತನ್ನ ಪ್ರಾಂತಕ್ಕೆ ಸೆಳೆದುಕೊಂಡು ಹೋದಳು ಆದರೆ ಸ್ವರೂಪಳಂತೆ ನೀನಿಲ್ಲ. ಆದುದರಿಂದ ರಾಜಾನನ್ನೂ ನೀನು ನಿಮ್ಮೂರಿಗೆ ಸೆಳೆದುಕೊಂಡು ಹೋಗಲಿಕ್ಕಿಲ್ಲ. ರಾಜಾ ಗುಜರಾತಿ. ಗುಜರಾತಿಗಳು ಸುಲಭವಾಗಿ ತಮ್ಮ ಊರನ್ನು ತೊರೆದು ಬರಲಾರರು ಆದುದರಿಂದ ನೀನು ಗುಜರಾತಕ್ಕೆ ಅಥವಾ ಮುಂಬಯಿಗೆ ಬಂದು ವಾಸಮಾಡಬಹುದೆಂದು ನಂಬಿದ್ದೇನೆ ನೀವು ಎಲ್ಲೇ ಇರಲಿ, ನೀವು ಸುಖಿಗಳಾಗಿರಿ ಮತ್ತು ತಾಯಿತಂದೆಗಳ ಕೀರ್ತಿಯನ್ನು ಇನ್ನಷ್ಟು ಬೆಳಗಿಸಿರಿ. ಇದೇ ನನ್ನ ಆಶೆ"

**ಕೃಷ್ಣರಾಜ**

ಮದುವೆಯಾದ ಕೃಷ್ಣಾ ಮುಂಬಯಿಗೆ ತೆರಳಿ, ಗಂಡನೊಂದಿಗೆ ವಾಸಿಸತೊಡಗಿದಳು ಕೃಷ್ಣ ರಾಜನನ್ನು ವರಿಸಿದ ಮೇಲೆ ರಾಜಕಾರಣದಿಂದ ನಿವೃತ್ತಳಾದಳೆಂದರೂ ಸರಿಯೆ ರಾಜಕೀಯ ರಂಗದಲ್ಲಿ ಪ್ರವೇಶಿಸುವವರ ಜೀವ ಮತ್ತು ಜೀವನಗಳೆರಡೂ ಅನಿಶ್ಚಿತ ಆಗಾಗ ಸೆರೆಮನೆಗಳಿಗೆ ತೆರಳಬೇಕು. ಲಾಠಿಗೆ ಎದೆಯೊಡ್ಡಿ ನಿಲ್ಲಬೇಕು ಆದರಂತೆ ಪತಿವಿರಹವನ್ನು ಸಹಿಸಬೇಕು ಸಂಸಾರ ಸುಖ, ಮಕ್ಕಳ ಸುಖಗಳಿಗೂ ತಿಲಾಂಜಲಿ ಎರೆಯದೆ ಗತ್ಯಂತರವಿಲ್ಲ. ಮಕ್ಕಳನ್ನು ಯೋಗ್ಯರೀತಿಯಾಗಿ ಸಾಕಿ ಸಲಹಿ ಬೆಳೆಸಲೂ ಅಶಕ್ಯವಾಗುತ್ತದೆ. ವಿಜಯಲಕ್ಷ್ಮಿಗೆ ತನ್ನ ಮಕ್ಕಳ ಕಡೆ ವಿಶೇಷ ಲಕ್ಷ ಕೊಡಲು ಸಾಧ್ಯವಾಗಿರಲಿಲ್ಲ. ಹತ್ತು ಹದಿಮೂರು ವರುಷಗಳ ವರೆಗೆ ಇದನ್ನೆಲ್ಲ ಕಂಡು ಬೇಸತ್ತ ಕೃಷ್ಣಾ ಆ ದಾರಿಯಿಂದ ವಿಮುಖಳಾದಳು.

**ಕಮಲಾ ವಿಯೋಗ**

ಕೃಷ್ಣಾ ಆನಂದ ಭವನದಿಂದ ಮುಂಬಯಿಗೆ ತೆರಳಿದರೆ, ಕಮಲಾ ಇಹಲೋಕವನ್ನೆ ಬಿಟ್ಟು ಅಗಲಿದಳು. ಅವಳ ಆರೋಗ್ಯ ಸುಧಾರಿಸಿರ ಲಿಲ್ಲ. ೧೯೩೫ ರಲ್ಲಿ ಅದು ಬಹಳ ಚಿಂತಾಜನಕ ಸ್ಥಿತಿಗೆ ಮುಟ್ಟಿತು. ಜವಾಹಿರಲಾಲರು ಆಗಲೂ ಸೆರೆಮನೆಯಲ್ಲೇ ಇದ್ದರು. ಆದರೂ ಕಮಲಾ ಳನ್ನು ಸ್ವಿಜರ್ಲಂಡಿಗೆ ಕಳಿಸುವ ಏರ್ಪಾಡಾಯಿತು. ಅಲ್ಲೂ ಅವಳು ಹಾಸಿಗೆಯಿಂದ ಏಳಲಾರದಾದಳು. ಸೈನಿ ಸೆರೆಮನೆಯಲ್ಲಿದ್ದ ಜವಾಹಿರ ಲಾಲರನ್ನು ಅಧಿಕಾರಿಗಳು ಬಿಡುಗಡೆಮಾಡಿದರು. ಜವಾಹಿರಲಾಲರು ಮರುದಿನವೇ ವಿಮಾನಮಾರ್ಗವಾಗಿ ಯುರೋಪಿಗೆ ಧಾವಿಸಿದರು. ೧೯೩೬ನೇ ಫೆಬ್ರುವರಿ ೨೮ ನೇ ತಾರೀಖಿನ ದಿನ ಕಮಲಾ ಚಿರನಿದ್ರೆಯಲ್ಲಿ ಲೀನಳಾದಳು.

**ಪ್ರಾಂತಿಕ ಸ್ವಾಯತ್ತತೆ**

ಜವಾಹಿರಲಾಲರು ಯುರೋಪಿನಲ್ಲಿರುವಾಗಲೇ ಲಖನೌ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಮುಂದಿನ ವರುಷ ಫೈಜ ಪುರದಲ್ಲೂ ಜನಾಂಗವು ಅವರ ಕೊರಳಿಗೇ ಹೂಮಾಲೆಯನ್ನು ಹಾಕಿತು ದೇಶದಲ್ಲಿ ಚುನಾವಣೆಯು ತೆರೆ ಉಕ್ಕಿತು. ಕಾಂಗ್ರೆಸ್ ಎಲ್ಲಕಡೆಗೂ ಪ್ರತಿಸ್ಪರ್ಧಿಗಳನ್ನು ಸೋಲಿಸಿ ಮಹಾವಿಜಯವನ್ನು ಸಂಪಾದಿಸಿತು. ಪ್ರಾಂತಿಕ ಸ್ವಾಯತ್ತತೆಯು ಸದುಪಯೋಗ ಮಾಡಿಕೊಂಡು ಹೋರಾಟವನ್ನು ಮುಂದೆ ಸಾಗಿಸಲೂ ಕಾಂಗ್ರೆಸ್ ನಿರ್ಧರಿಸಿತು. ಆ ನಿರ್ಣಯಕ್ಕನುಗುಣ ವಾಗಿ ಪ್ರಾಂತಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳನ್ನು ರಚಿಸಿದರು. ವಿಜಯಲಕ್ಷ್ಮಿ ಕೂಡಾ ಸಂಯುಕ್ತಪ್ರಾಂತದಲ್ಲಿ ಹುರಿಯಾಳಾಗಿ ನಿಂತು ಗೆದ್ದುದರಿಂದ ಅವಳಿಗೂ ಕರೆಬಂದಿತು. ವಿಜಯಲಕ್ಷ್ಮಿ ಮಂತ್ರಿಯಾದಳು.

# ೬. ಮಂತ್ರಿ ಪದವಿ

ದಿನಗಳೆದಂತೆ, ಜಾಗತಿಕ ಪರಿಸ್ಥಿತಿಯು ಅಲ್ಲೋಲ ಕಲ್ಲೋಲವಾಗತೊಡಗಿತು. "ಫ್ಯಾಸಿಝಂ"ದ ಅವತಾರವೇ ಈ ದುರವಸ್ಥೆಗೆ ಬಹುಮಟ್ಟಿಗೆ ಕಾರಣ. ಮುಸ್ಸೋಲಿನಿಯ ಇಟಲಿ, ಹಿಟ್ಲರನ ಜರ್ಮನಿ ಮತ್ತು ಟೋಜೋ ಜಪಾನ್ ಸಾಮ್ರಾಜ್ಯದಾಹದಿಂದ ಪರಿತಪಿಸಲಾರಂಭಿಸಿದುವು. ಅದನ್ನು ಇಂಗಿಸಿಕೊಳ್ಳಲು ಅಬಲ ರಾಜ್ಯಗಳ ಕಡೆ ಕಣ್ಣು ಕೈ ಕಾಲು ಚಾಚಿದುವು. ಆದರೆ ಅನೇಕ ಈ ಸಣ್ಣ ಸಣ್ಣ ದೇಶಗಳು ಆಂಗ್ಲೋ-ಫ್ರೆಂಚರ ಪ್ರಭಾವ, ಅಧಿಕಾರಗಳಿಗೊಳಗಾಗಿದ್ದ ಪ್ರದೇಶಗಳು ಆದುದರಿಂದ ಅವುಗಳ ಮೇಲಿನ ತಮ್ಮ ಒಡೆತನ ಅಥವಾ ವರ್ಚಸ್ಸನ್ನು ಬಿಟ್ಟು ಕೊಡಲು ಅವರೂ ಸಿದ್ಧರಿರಲಿಲ್ಲ. ಹೀಗಾಗಿ ಫ್ಯಾಸಿಝಂ ಮತ್ತು ಸಾಮ್ರಾಜ್ಯವಾದಗಳೊಳಗೆ ತೀಕ್ಷ್ಣ ತಿಕ್ಕಾಟಕ್ಕೇ ಆರಂಭವಾಯಿತೆಂದನ್ನಬಹುದು "ಏಶಿಯವು ಏಶಿಯನ್ನರಿಗೆ" ಎಂಬ ಸೊಲ್ಲು ಪಲ್ಲವಿ ಹಾಡುತ್ತ ಜಪಾನ್ ಮಂಚೂರಿಯವನ್ನು ಆಕ್ರಮಿಸಿತು. ರೋಮನ್ ಸಾಮ್ರಾಜ್ಯದ ಕನಸುಕಂಡ ಮುಸ್ಸೊಲಿನಿ, ಅಬಿಸೀನಿಯವನ್ನು ನುಂಗಿ ನೀರು ಕುಡಿದ. ಹಿಟ್ಲರನ ಸಹಾಯದಿಂದ ಸ್ಪೇನಿನಲ್ಲಿ ಫ್ರಾಂಕೋ ದಂಗೆಯೆದ್ದು ತನ್ನ ಧ್ವಜ ಹಾರಿಸಿದ. ವರ್ಸಾಯಿ ಒಪ್ಪಂದದನ್ವಯ ಜರ್ಮನಿಯಿಂದ ಹರಿದು ಪ್ರತ್ಯೇಕವಾಗಿಟ್ಟಿದ್ದ ಸಾರ್ ಮತ್ತು ರಾಯಿನ್‌ಲಂಡ್‌ಗಳನ್ನು ಹಿಟ್ಲರ್ ಬಲಾತ್ಕಾರದಿಂದ ವಶಪಡಿಸಿಕೊಂಡು ಜರ್ಮನಿಯ ಏಕೀಕರಣ ಸಾಧಿಸಲೆತ್ನಿಸುತ್ತಿದ್ದ. ಈ ಯತ್ನದಲ್ಲಿ ಆಸ್ಟ್ರಿಯವನ್ನು ಸಂಚು ಹೊಂಚುಗಳಿಂದ ಆಕ್ರಮಿಸಿ, 'ಸುಡೆಟನ್‌ಲಂಡ್' ಕಡೆ ದೃಷ್ಟಿ ಬೀರಿ, ಯುದ್ಧಕ್ಕೆ ಅಣಿಯಾದ ಈರೀತಿ, ಪಶ್ಚಿಮ ಯುರೋಪ್ ಮತ್ತು ಪೂರ್ವ ಏಶಿಯಾಗಳಲ್ಲಿ ಯುದ್ಧದ ಕಾರ್ಮೋಡಗಳು ಕವಿಯ ತೊಡಗಿದುವು.

**ಕಾವು ಏರಿತು**

ಅಂತರ್ರಾಷ್ಟ್ರೀಯ ಪರಿಸ್ಥಿತಿಯನ್ನು ಅವಲೋಕಿಸುತ್ತ ಬಂದ ಭಾರತದ ದೇಶಾಭಿಮಾನಿ ಜನರಲ್ಲೂ ಹೋರಾಟದ ಕಾವು ಏರತೊಡಗಿತು. ಸ್ವಾತಂತ್ರ್ಯ

ಪ್ರಿಯ ಜನ ದೇಶದ ಎಲ್ಲ ಕಡೆಗಳಲ್ಲೂ ಸಭೆ, ಮೆರವಣಿಗೆಗಳನ್ನು ನಡೆಸಿ, ಅಬಿಸೀನಿಯ ಚೀನ, ಸ್ಪೇನ್‌ಗಳ ಜನತೆಯ ಬಗ್ಗೆ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ರಾಷ್ಟ್ರೀಯ ಕಾಂಗ್ರೆಸ್ ಸ್ಪೇನ್ ದೇಶದ ಜನತೆಗೆ ಆಹಾರ ವಸ್ತುಗಳನ್ನು ಕಳಿಸಿತು. ಚೀನದ ಗಾಯಾಳುಗಳ ಆರೈಕೆಗಾಗಿ ಶುಶ್ರೂಷಾ ಪಥಕವನ್ನು ಕಳಿಸಿಕೊಟ್ಟಿತು. ಚೀನಾ, ಸ್ಪೈಯಿನ್, ಅಬಿಸೀನಿಯಾ ದೇಶಗಳ ಸಾಮಾನ್ಯ ಜನತೆ ಪಾಶವೀ ಶಕ್ತಿಯ ವಿರುದ್ಧ ಹೂಡಿದ ಸಮರದ ವಾರ್ತೆಗಳು ಭಾರತೀಯರಲ್ಲೂ ರಣಕುತೂಹಲವನ್ನು ಕೆದರಿದುವು. "ಹೋರಾಟ"ಎಂಬ ಕೂಗು ಎಲ್ಲೆಡೆಗಳಲ್ಲೂ ಕೇಳಲಾರಂಭಿಸಿತು ಭಾರತವನ್ನು ಸಂತೈಸದೆ ಬೇರೆ ಉಪಾಯವಿರಲಿಲ್ಲ

**ಬ್ರಿಟಿಶ್ ಘಟನೆ**

ಭಾರತವನ್ನು ಸಂತೈಸಲು ಬ್ರಿಟಿಶರು ೧೯೩೫ ನೇ ಕಾಯಿದೆಯನ್ನು ದೇಶದ ಮುಂದಿಟ್ಟರು. ಈ "ಹೊಸ ಘಟನೆ"ಯ ಬಗ್ಗೆ ಕಾಂಗ್ರೆಸ್ಸೇತರ ಮುಖಂಡರು ಚರ್ಚೆ ಕೂಡಾ ನಡೆಸಿದ್ದರು. ಆದರನ್ವಯ ಪ್ರಾಂತಗಳಲ್ಲಿ ಸ್ವಲ್ಪ ಮಟ್ಟಿಗೆ ಅಧಿಕಾರವು ದೊರೆವಂತಿತ್ತು. ಪ್ರಾಂತಗಳ ಮತ್ತು ಸಂಸ್ಥಾನಗಳ ಪ್ರತಿನಿಧಿಗಳನ್ನೊಳಗೊಂಡ "ಫೆಡರಲ್'ಸರಕಾರವನ್ನು ಕೇಂದ್ರದಲ್ಲಿ ಸ್ಥಾಪಿಸುವುದು ಅದರ ಆಶಯ. ಸಂಸ್ಥಾನಗಳ ಪ್ರತಿನಿಧಿಗಳು ಜನ ಪ್ರತಿನಿಧಿಗಳಲ್ಲ. ಹೀಗಿರುವಾಗ, ಅಂತಹ ಫೆಡರಲ್ ಸರಕಾರವು ಬ್ರಿಟಿಶ್ ಕೈಗೊಂಬೆಯಾಗುವುದು ನಿಶ್ಚಯ. ತಮ್ಮ ಒಡೆತನವನ್ನು ಕಾಯ್ದುಕೊಳ್ಳಲು ಬ್ರಿಟಿಶರು ಈ ರೀತಿಯ ಒಂದು ಕುಹಕೋಪಾಯವನ್ನು ಹೂಡಿದ್ದರು. ಆದರೆ ಕಾಂಗ್ರೆಸ್ಸು ಅದನ್ನು ಸಂಪೂರ್ಣವಾಗಿ ನಿರಾಕರಿಸಿತು. ಆದರೂ ಕಾಂಗ್ರೆಸ್ಸಿಗೆ ಜನತಾ ಬೆಂಬಲವಿದೆಯೆಂಬುದನ್ನು ಪ್ರದರ್ಶಿಸಲು ಮುಖಂಡರ ಆಶೆ. ಆ ಉದ್ದೇಶವನ್ನು ಸಾಧಿಸಲು ಚುನಾವಣೆಯಲ್ಲಿ ಭಾಗವಹಿಸಲೂ ಅವರು ನಿರ್ಧರಿಸಿದರು. ಆ ರೀತಿ ಕೂಡಾ ಫೆಡರಲ್ ಯೋಜನೆಯನ್ನು ವಿಫಲಗೊಳಿಸಲು ಅವರು ಬಯಸಿದರು.

**೧೯೩೭ ರ ಮಹಾಚುನಾವಣೆ**

೧೯೩೭ ರ ಮಹಾಚುನಾವಣೆಯು ಚಿರಸ್ಮರಣೀಯ. ದೊಡ್ಡ ದೊಡ್ಡ ಮುಖಂಡರು ಉಮೇದ್ವಾರರಾಗಿ ನಿಂತಿರಲಿಲ್ಲ. ಆದರೆ ಕಾಂಗ್ರೆಸ್ಸಿನ

ಷರವಾಗಿ ಪ್ರಚಾರ ಕೈಕೊಳ್ಳಲು ದೇಶದಾದ್ಯಂತ ಸಂಚರಿಸಿದರು. ಜವಾಹಿರ ಲಾಲರಿಗಂತೂ ವಿಶ್ರಾಂತಿಯೇ ಇಲ್ಲ. ನಾಲ್ಕು ತಿಂಗಳ ಅವಧಿಯಲ್ಲಿ ಅವರು ಅರ್ಧಲಕ್ಷ ಮೈಲುಗಳನ್ನು ಸುತ್ತಿದರು. ವಿಮಾನ,ರೇಲ್ವೆ,ಲಾರಿ,ಮೋಟಾರು ಕಾರು, ಕುದುರೆಕೋಚು, ಕುದುರೆ, ಎತ್ತಿನಗಾಡಿ, ಸೈಕಲ್, ಒಂಟೆ, ಆನೆ, ಹಡಗ, ದೋಣಿ, ಲಾಂಚ್ ಮೊದಲಾದ ಎಲ್ಲ ವಾಹನಗಳನ್ನು ಉಪಯೋಗಿಸಿದರು. ತಮ್ಮೊಂದಿಗೆ ಧ್ವನಿವಾಹಕ ಯಂತ್ರವನ್ನು ಅವರು ಒಯ್ಯುತಿದ್ದರು ದಿನಂಪ್ರತಿ ೧೨ ಭಾಷಣಗಳಾದರೂ ಆಗುತಿತ್ತು ಒಂದೊಂದು ಕಡೆ ಲಕ್ಷ ಗಟ್ಟಲೆ ಜನ ಕೂಡುತಿದ್ದರು ಹತ್ತು ಸಾವಿರ, ಇಪ್ಪತ್ತು ಸಾವಿರ ಜನರು ರಸ್ತೆಯ ಬದಿಗಳಲ್ಲೇ ಗುಂಪುಕೂಡುತಿದ್ದರು. ಕೋಟಿಗಟ್ಟಲೆ ಜನರು ಆಶಾ ದೃಷ್ಟಿಯಿಂದ ಅವರ ಕಡೆ ನೋಡಿದರು. ಕೋಟಿಗಟ್ಟಲೆ ಹೃದಯಗಳು ಭಾರತದ ಸ್ವಾಂತ್ರ್ಯಕ್ಕಾಗಿ ಹಂಬಲಿಸಿದುವು ಕೋಟಿಗಟ್ಟಲೆ ವರದ ಹಸ್ತಗಳು ಹೂವಿಳೆಗರೆದು ಹರಸಿದುವು. ಆಸೇತು ಹಿಮಾಚಲದ ವರೆಗೆ ಅಂದು ಬೀಸುತಿದ್ದ ಉತ್ಸಾಹದ ಗಾಳಿಯನ್ನು ವರ್ಣಿಸುವುದೇ ಕಷ್ಟ.

## ವಿಜಯಲಕ್ಷ್ಮಿಯ ವಿಜಯ

ವಿಜಯುಲಕ್ಷ್ಮಿ ಕ್ರ-ಡಾ, ಸಂಯುಕ್ತ ಪ್ರಾಂತದಲ್ಲಿ ಕಾನಪುರದ ಬಿಲಹಾರ ಮತದಾರ ಸಂಘದಿಂದ ಕಾಂಗ್ರೆಸ್ ಹುರಿಯಾಳಾಗಿ ನಿಂತಿದ್ದಳು. ಅಲ್ಲಿದ್ದ ಮತದಾರ ಸಂಖ್ಯೆ ೩೮ ಸಾವಿರ. ಅವಳ ಪ್ರತಿಸ್ಪರ್ಧಿಯಾಗಿ ಶ್ರೀವಾಸ್ತವರ ಹೆಂಡತಿ ನಿಂತಿದ್ದಳು. ಶ್ರೀವಾಸ್ತವರು ಆಗ ಆ ಪ್ರಾಂತದ ಶಿಕ್ಷಣ ಮಂತ್ರಿ. ಅಂದ ಬಳಿಕ ಸರಕಾರದ ಬೆಂಬಲ ಕೂಡಾ ಶ್ರೀವಾಸ್ತವರ ಹೆಂಡತಿಗಿದ್ದಿತೆಂದೆನಬಹುದು ಹೀಗಾಗಿ ಚುನಾವಣೆ ಬಹಳ ತೀಕ್ಷ್ಣವಾಗಿದ್ದಿತು ಮತದಾರರನ್ನು ಒಲಿಸಿಕೊಳ್ಳಲು ವಿಜಯಲಕ್ಷ್ಮಿ ಕೂಡಾ ಪ್ರಾಂತದಲ್ಲೆಲ್ಲ ಸಂಚರಿಸಿದಳು. ಸಭೆ, ಮೆರವಣಿಗೆ, ಭಾಷಣಗಳು ದಿನನಿತ್ಯದ ಘಟನೆಗಳಾದುವು ಎಲ್ಲಿ ಹೋದರೂ ಜನರಲ್ಲಿ ಪ್ರಚಂಡ ಉತ್ಸಾಹ ಎದ್ದು ಕಾಣುತಿತ್ತು ಕಾಂಗ್ರೆಸೆಂದರೆ ಎಲ್ಲರಿಗೂ ಪ್ರೀತ್ಯಾದರವೇ ಸರಿ. ಆದುದರಿಂದ ಚುನಾವಣೆಯಲ್ಲಿ ಶ್ರೀವಾಸ್ತವರ ಹೆಂಡತಿಗಿಂತ ಒಂದು ಸಾವಿರ ಹೆಚ್ಚು ಮತಗಳು ವಿಜಯಲಕ್ಷ್ಮಿಗೆ ಬಿದ್ದು, ವಿಜಯ ಲಭಿಸಿತು.

**ಪಂಡಿತ ಪಂತರ ತಂತಿ**

ಚುನಾವಣೆ ಮುಗಿದ ಮೇಲೆ ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಬೇಕೆಂದು ನಿರ್ಣಯವಾಯಿತು. ಅದರಂತೆ, ಪ್ರಾಂತಗಳಲ್ಲಿ ಮಂತ್ರಿಮಂಡಲಗಳನ್ನು ಸ್ಥಾಪಿಸಲು ನಿರ್ಧರಿಸಿದರು. ಸಂಯುಕ್ತ ಪ್ರಾಂತದ ಪ್ರಧಾನ ಮಂತ್ರಿಯ ಸ್ಥಾನಕ್ಕೆ ಪಂಡಿತ ಗೋವಿಂದ ವಲ್ಲಭ ಪಂತರನ್ನು ಆರಿಸಿದ್ದರು. ಒಂದು ದಿನ ಮುಂಜಾನೆ ಪಂತರು ವಿಜಯ ಲಕ್ಷ್ಮಿಗೂ ತಂತಿ ಕಳಿಸಿ, ತಮ್ಮ ಮಂತ್ರಿ ಮಂಡಲದಲ್ಲಿ ಸೇರಿಕೊಳ್ಳಬೇಕೆಂದು ವಿನಂತಿ ಮಾಡಿಕೊಂಡರು. ಮೊದಲು ವಿಜಯಲಕ್ಷ್ಮಿ ಸಮ್ಮತಿಸದಿದ್ದರೂ ಕೊನೆಗೆ ಒಪ್ಪಿಕೊಂಡಳು. ಮಂತ್ರಿ ಪದಕ್ಕೆ ಅವಳು ಅರ್ಹಳೇ ಸರಿ. ಬಾಲ್ಯದಿಂದಲೂ ಅವಳದು ಶಿಸ್ತಿನ ಜೀವನ. ಎಂದೂ ಉದ್ರೇಕಳಾಗಿ ತಲೆ ಕೆಡಿಸಿಕೊಂಡು ಅಸಭ್ಯಳಂತೆ ವರ್ತಿಸಲಾರಳು. ಹೊಸರಳ ಶಿಸ್ತಿನ ಯಂತ್ರದಲ್ಲಿ ಪಾರಾಗಿ ಬಂದ ವಿಜಯಲಕ್ಷ್ಮಿ ೧೯೩೭ನೇ ಜುಲಾಯಿ ತಿಂಗಳ ೨೯ನೇ ತಾರೀಖಿನ ದಿನ ಮುಂಜಾನೆ ಹನ್ನೊಂದು ಗಂಟೆಗೆ ಆರೋಗ್ಯ ಖಾತೆಯ ಮಂತ್ರಿಯಾದಳು.

**ಸ್ವರೂಪ ರಾಣಿ**

ಕಾಂಗ್ರೆಸ್ ಅಧಿಕಾರ ಸ್ವೀಕರಿಸಿದುದ್ದರಿಂದ ಸ್ವಲ್ಪ ಸಮಯದ ವರೆಗೆ ಸೆರೆಮನೆಗಳ ಬಾಗಿಲುಗಳು ಮುಚ್ಚಿದುವು. ಆನಂದ ಭವನದಲ್ಲಿರುವ ಅವಕಾಶ ಜವಾಹಿರಲಾಲರಿಗೆ ದೊರೆತಿದ್ದಿತು. ಅವರನ್ನು ಕಾಣಲು ಇನ್ನಿತರ ಬಂಧು ಬಳಗದವರೂ ಕೂಡಿದ್ದರು. ರಣಜಿತ್, ವಿಜಯಲಕ್ಷ್ಮಿ, ಮಕ್ಕಳು ಮರಿ, ಕೃಷ್ಣಾ ಬಂದು ಮನೆ ತುಂಬಿದ್ದರು. ಎಲ್ಲರೂ ಏಕಕಾಲಕ್ಕೆ ಊಟಕ್ಕೆ ಕುಳಿತರು. ಸ್ವರೂಪರಾಣಿ ನೆಹರು ಮಕ್ಕಳೊಂದಿಗೆ ಹರಟೆ ಹೊಡೆದರು. ಊಟ ಮುಗಿದ ಮೇಲೂ ರಾತ್ರಿ ಮಾತು ನಡೆಯಿತು. ಲಖನೌ ನಗರಕ್ಕೆ ತೆರಳುವ ಅವಶ್ಯಕತೆಯಿದ್ದುದರಿಂದ ವಿಜಯಲಕ್ಷ್ಮಿ ತಾಯಿಯನ್ನು ಬೀಳ್ಕೊಡಲು ತೆರಳಿದಾಗ ಸ್ವರೂಪರಾಣಿ ಆಲಿಂಗಿಸಲು ಮುಂದೆ ಬಂದರು. ಆದರೆ ಒಮ್ಮೆಯೇ ಹೆಜ್ಜೆ ತಪ್ಪಿತು ವಿಜಯಲಕ್ಷ್ಮಿ ಹಿಡಿದುಕೊಳ್ಳದಿರುತಿದ್ದರೆ ಕೆಳಗೆ ಉರುಳುತಿದ್ದರು. ಅವರನ್ನು ಎತ್ತಿ ಹಾಸಿಗೆಯಲ್ಲಿ ಮಲಗಿಸಿದಾಗ ಪ್ರಜ್ಞೆಯೂ ಇರಲಿಲ್ಲ. ಗಾಬರಿಯಾಗಿ ಡಾಕ್ಟರರಿಗೆ ಹೇಳಿ ಕಳಿಸಿದರು. ಪರೀಕ್ಷಿಸಲು ಬಂದ ಡಾಕ್ಟರರೂ ನಿರಾಶೆ ವ್ಯಕ್ತಪಡಿಸಿದರು ಒಂದೆರಡು ತಾಸುಗಳೊಳಗೆ

ಸ್ವರೂಪರಾಣಿ ಇಹಲೋಕದ ಯಾತ್ರೆಯನ್ನು ಮುಗಿಸಬೇಕಾಗಿತ್ತು. ರಾತ್ರಿ ಬೆಳಗಾಗುವ ವರೆಗೆ ಎಲ್ಲರೂ ಸ್ವರೂಪರಾಣಿಯು ಹಾಸಿಗೆಯ ಬಳಿ ಕಣ್ಣೆವೆಗಳನ್ನಿಕ್ಕದೆ ಕುಳಿತರು. ಈ ರೀತಿ ಒಮ್ಮಿಂದೊಮ್ಮೆಯೇ ಮರಣ ಬರುವುದನ್ನು ಜವಾಹಿರಲಾಲರೂ ಕಣ್ಣಾರೆ ಕಂಡಿರಲಿಲ್ಲ. ಮುಂಜಾನೆ ಐದು ಗಂಟೆಗೆ ಸ್ವರೂಪರಾಣಿಯು ಪ್ರಾಣ ಹಾರಿ ಹೋಯಿತು

**ಇಚ್ಛಾ ಮರಣಿ ಅಕ್ಕ**

ಸ್ವರೂಪರಾಣಿ ಅಗಲಿ ಹೋದಾಗ, ಅವರ ಅಕ್ಕ ಬೀಬಿ ಅಮ್ಮ ಆ ಕೋಣೆಯಲ್ಲಿರಲಿಲ್ಲ ಮರಣದ ಸುದ್ದಿಯನ್ನು ವಿಜಯಲಕ್ಷ್ಮಿ ತಿಳಿಸಿದಾಗ ಬೀಬಿ ಅಮ್ಮ ನಂಬಲಿಲ್ಲ. ಅಕ್ಕ ಜೀವಂತವಿರುವಾಗ ತಂಗಿಗೆ ಮರಣ ಬಂದುದು ಆಶ್ಚರ್ಯವೇ! ಆಶ್ಚರ್ಯದಿಂದ ಕೊನೆಗೆ ಆಘಾತವಾದ ಭಾವ ಅವರಲ್ಲುದಯಿಸಿತು. ಕೈ ಕಾಲುಗಳೆಲ್ಲ ತಣ್ಣಗಾದುವು. ಆದರೆ ಹಿರಿಯರಾದ ತಾವೇ ಅಳುತ್ತ ಕುಳಿತರೆ ಮಕ್ಕಳಿಗೆ ಇನ್ನಷ್ಟು ದುಃಖವಾಗುವುದೆಂದು ಅವರು ಊಹಿಸಿ ಕಣ್ಣೀರನ್ನೂ ನುಂಗಿಕೊಂಡರು. ಸ್ವರೂಪ ರಾಣಿಯ ಸ್ಮಶಾನ ಯಾತ್ರೆಗೆ ತಾವೇ ಎಲ್ಲ ಸಿದ್ಧತೆಗಳನ್ನು ನಡೆಸಿದರು ಆನಂದ ಭವನದ ವೆರಂಡಾದಲ್ಲಿ ನಿಂತು ಸ್ಮಶಾನ ಯಾತ್ರೆಯನ್ನು ಕಂಡರು ಆ ಮೆರವಣಿಗೆ ದೃಷ್ಟಿಗೆ ಅಗೋಚರವಾದ ಮೇಲೆ ಒಳಗೆ ಬಂದರು. "ಸ್ವರೂಪ ಹೊರಟು ಹೋದ ಮೇಲೆ ನಾನು ಬದುಕಿರುವುದಾದರೂ ಏತಕ್ಕೆ? ನಾನೂ ಹೊರಡುತ್ತೇನೆ" ಎಂದು ವಟಗುಟ್ಟುತಿದ್ದರು. ತಾಯಿಯ ಅಂತ್ಯ ಸಂಸ್ಕಾರ ಮುಗಿಸಿಕೊಂಡು ಜವಾಹಿರಲಾಲರು ಮರಳಿದಾಗ ಬೀಬಿ ಅಮ್ಮ ಹಾಸಿಗೆಯಲ್ಲಿ ಮಲಗಿಕೊಂಡಿದ್ದರು ಮೈ ಚೆನ್ನಾಗಿರಲಿಲ್ಲ. ಜವಾಹಿರಲಾಲರು ಗಾಬರಿಯಾಗಿ ಡಾಕ್ಟರರನ್ನು ಕರೆಸಿದರು. ಡಾಕ್ಟರರಿಗೂ ಗಾಬರಿ ಅವರು ಬಂದು ಪರೀಕ್ಷಿಸಿ ಮೋರೆ ಚಿಕ್ಕದು ಮಾಡಿದರು. ಬೀಬಿ ಅಮ್ಮ ಕೂಡಾ ಬದುಕುವಂತಿರಲಿಲ್ಲ. ಮರುದಿನ ಮುಂಜಾನೆ ಐದು ಗಂಟೆಗೆ ಬೀಬಿ ಅಮ್ಮ ಕೂಡಾ ಮರಣ ಹೊಂದಿದರು. ಸ್ವರೂಪರಾಣಿ ನೆಹರು ಅಗಲಿದ ೨೪ ತಾಸುಗಳ ಮೇಲೆ ಆವರು ಉಳಿಯಲಿಲ್ಲ ಅವರ ಮರಣದಿಂದ ಎಲ್ಲರಿಗೂ ಆಶ್ಚರ್ಯ ೨೪ ತಾಸುಗಳ ಮೊದಲು ಅವರು ಆರೋಗ್ಯದಿಂದಿದ್ದರು. ಯಾವ ರೋಗವೂ ಇರಲಿಲ್ಲ. ಬೀಬಿ ಅಮ್ಮ ದೊಡ್ಡ ಸಾಧು ಇರಬೇಕೆಂದು ಜನ

ಅವರ ಚಿತೆಗೆ ನಮಸ್ಕಾರ ಮಾಡಿದರು. ನಿಜವಾಗಿಯೂ ಅವರು ಸನ್ಯಾಸಿಯೇ ಸನ್ಯಾಸಿ ಜೀವನವನ್ನೇ ಪಾಲಿಸುತ್ತ ಬಂದಿದ್ದರು. ಕೊನೆಗಾಲಕ್ಕೂ ಹಿಂದಿನ ಸನ್ಯಾಸಿಗಳಂತೆ ಇಚ್ಛಾಮರಣಿಯಾದರು.

**ಸರಕಾರೀ ಕಚೇರಿ**

ವಿಜಯಲಕ್ಷ್ಮಿ ಮಂತ್ರಿ ಪದವಿಯನ್ನು ಸ್ವೀಕರಿಸಿದಮೇಲೆ ಅನೇಕ ಸಮಸೆಗಳನ್ನು ಪರಿಹರಿಸಬೇಕಾಗಿತ್ತು. ಧೋರಣದ ಮಾತು ಒತ್ತಟ್ಟಿಗಿರಲಿ ಸರಕಾರೀ ಕಚೇರಿಯ ವಾತಾವರಣದಲ್ಲೂ ಬದಲಾವಣೆ ಅವಶ್ಯಕ. ಸರಕಾರೀ ಕಚೇರಿ ಒಂದು ದೊಡ್ಡ ಯಂತ್ರದಂತೆ ಕಾಣುತ್ತಿತ್ತು. ಆ ಬೋಳು ಗೋಡೆಗಳು, ಅಸಂಖ್ಯ ಕುರ್ಚಿ ಮೇಜುಗಳು, ಬೆಟ್ಟದಂತೆ ಬಿದ್ದಿರುವ ರಿಕಾರ್ಡಗಳ ಫೈಲುಗಳು ಯಾರನ್ನಾದರೂ ಧೃತಿಗೆಡಿಸದೇ ಇರಲಾರವು. ಅದರಿಂದ ಬೇಸರ ಬರುವುದೇ ನಿಶ್ಚಯ. ಬೇಸರವಿದ್ದರೆ ಕೆಲಸ ಹೇಗೆ ನಡೆಯಬೇಕು.? ಆದುದರಿಂದ ಮನಸ್ಸಿಗೆ ಸ್ವಲ್ಪ ಸಂತೋಷವನ್ನುಂಟುಮಾಡಲು ಕಚೇರಿಯ ವ್ಯವಸ್ಥೆಯಲ್ಲೂ ವಿಜಯಲಕ್ಷ್ಮಿ ಸ್ವಲ್ಪ ಬದಲಾವಣೆ ಸಾಧಿಸಿದಳು. ನೆಲಕ್ಕೊಂದು ಹಸುರು ಜಮಖಾನೆ ಬಂತು. ಮನೆಯಿಂದ "ಕರ್ಟನ್ಸ್" ತಂದು ಕಿಟಕಿಗಳನ್ನು ಶೃಂಗರಿಸಿದಳು ಗುಲಾಬಿ ಹೂಗಳನ್ನಿಡಲು ಒಂದು ಪಾತ್ರಾಲಿಯನ್ನು ತರಿಸಿದಳು. ಆ ಮೇಲೆ ಒಂದೊಂದೇ "ಫೈಲು"ಗಳನ್ನು ಕೈಗೆ ತೆಗೆದುಕೊಂಡಳು.

**ಪತ್ರಿಕೋದ್ಯಮಿಗಳ "ಕಾಟ"**

ವಿಜಯಲಕ್ಷ್ಮಿ ಮಂತ್ರಿಯಾಗಿ ಸಾಧಿಸಿದ ಕಾರ್ಯದಿಂದ ಅವಳ ಹೆಸರು ಎಲ್ಲ ಕಡೆಗೂ ಹಬ್ಬಿತು ಪತ್ರಿಕೋದ್ಯಮಿಗಳು ತನಗೆ ಕೊಡುತ್ತಿದ್ದ "ಕಾಟ"ವನ್ನು ಸಹಿಸಲಾರದೆ ಅದೊಂದು "ಪಿಡುಗು" ಎಂದು ನಗೆಮಾತು ಆಡುತ್ತಿದ್ದಳು. ಪತ್ರಿಕೋದ್ಯಮಿಗಳು ಇಲ್ಲದ ಸ್ಥಳಗಳಿಲ್ಲ. ಅವರು ಸರ್ವಾಂತರ್ಯಾಮಿಗಳು. ಇಲ್ಲ ಸಲ್ಲದ ಪ್ರಶ್ನೆಗಳನ್ನು ಕೇಳಲೂ ಹಿಂಜರಿಯುವದಿಲ್ಲ ಕೊಟ್ಟ ಉತ್ತರಕ್ಕೆ ಉಪ್ಪುಖಾರ ಹಚ್ಚಿ ಹಿಮಾಲಯದಷ್ಟು ಬೆಳೆಸಿ ಪ್ರಸಿದ್ಧಿಸುವರು. ಒಮ್ಮೆ ವಿದ್ಯಾರ್ಥಿನಿಯರನ್ನುದ್ದೇಶಿಸಿ ಮಾತನಾಡುವ ಸಂದರ್ಭ ವಿಜಯಲಕ್ಷ್ಮಿಗೆ ಬಂದಿತ್ತು. "ವಿದ್ಯಾರ್ಥಿನಿಯರು ಗೊಡ್ಡು ಸಂಪ್ರದಾಯಗಳಿಗೆ ಬಗ್ಗಬಾರದು ಅವು ವ್ಯಕ್ತಿತ್ವದ

ವಿಕಾಸಕ್ಕೆ ಅಡ್ಡಬಂದರೆ ಪ್ರತಿಭಟಿಸಬೇಕು" ಎಂದು ವಿಜಯಲಕ್ಷ್ಮಿ ನುಡಿದಳು. "ಸ್ತ್ರೀಯರ ವಿವಾಹ ವಿಚ್ಛೇದನ ಹಕ್ಕಿಗೆ ವಿಜಯಲಕ್ಷ್ಮಿಯ ಸಂಪೂರ್ಣ ಬೆಂಬಲ" ಎಂದು ಮರುದಿನದ ಪತ್ರಿಕೆಗಳಲ್ಲಿ ದಪ್ಪಕ್ಷರಗಳಿಂದ ಮುದ್ರಿಸಿದ್ದರು "ಶಾರೀರಿಕ ಶಿಕ್ಷಣದ ಬಗ್ಗೆ ನಿಮ್ಮ ಅಭಿಪ್ರಾಯ ಬೇಕು" ಎಂದು ಒಬ್ಬ ಯುರೋಪಿಯನ್ ಪತ್ರಿಕೋದ್ಯೋಗಿ ಪ್ರಶ್ನಿಸಿದನಂತೆ. "ಅದು ಅವಶ್ಯವೆಂದು ನನ್ನ ಮತ. ಆದರೆ ಹಿಂದೀ ಪದ್ಧತಿಯೇ ಒಳ್ಳೆಯದು" ಎಂದು ವಿಜಯಲಕ್ಷ್ಮಿ ಉತ್ತರ ವಿತ್ತಳು. "ವಿಜಯಲಕ್ಷ್ಮಿ ದಿನಂಪ್ರತಿ ಶೀರ್ಷಾಸನ ಹಾಕಿ ಆಮೇಲೆ ಕೆಲಸಮಾಡಲು ಆರಂಭಿಸುತ್ತಾಳೆ" ಎಂದು ಅವನು ಪ್ರಕಟಿಸಿದ ಇನ್ನೊಬ್ಬ ಬಂದು, "ರಣಜಿತ್ ಪಂಡಿತರನ್ನು ಸೆರೆಮನೆಯಲ್ಲಿ ಭೆಟ್ಟಿಯಾದಮೇಲೆ ಲಗ್ನವಾದಿರಾ?" ಎಂದು ಕೇಳಿದ. ಅವಳು ಲಗ್ನವಾಗಿ ಹತ್ತುವರುಷಗಳ ತರುವಾಯ ಸೆರೆಮನೆಗೆ ತೆರಳಿದ್ದಳು. ಆ ರೀತಿ ಉತ್ತರ ಕೊಟ್ಟರೂ ಆ ಪತ್ರಿಕೋದ್ಯಮಿ ಆದನ್ನು ಮರೆಸಿ, ವಿಜಯಲಕ್ಷ್ಮಿ--ರಣಜಿತ್‌ರವರ ಪ್ರೇಮ ವಿವಾಹದ ಬಗ್ಗೆ ದೊಡ್ಡ ಕಟ್ಟುಕತೆ ಕಲ್ಪಿಸಿ ಬರೆದ.

### ಆಯುರ್ವೇದಕ್ಕೆ ಪ್ರೋತ್ಸಾಹ

ವಿಜಯಲಕ್ಷ್ಮಿ ಮಂತ್ರಿಯಾಗಿದ್ದಾಗಲೇ ಸಂಯುಕ್ತ ಪ್ರಾಂತದಲ್ಲಿ ಆಯುರ್ವೇದಕ್ಕೆ ಅಧಿಕ ಪ್ರೋತ್ಸಾಹ ಕೊಡಲು ಯತ್ನಿಸಿದಳು ಪ್ರಾಂತದಲ್ಲಿ ವೈದ್ಯಕೀಯ ಸೌಕರ್ಯ ಅಷ್ಟು ತೃಪ್ತಿಕರವಿರಲಿಲ್ಲ ಆಸ್ಪತ್ರೆಗಳಿದ್ದುದೂ ಹೆಚ್ಚಾಗಿ ನಗರಗಳಲ್ಲೇ ಅದರಿಂದ ಹಳ್ಳಿಯ ಜನರಿಗೆ ಅನಾನುಕೂಲವೇ ಬಹಳ ಈ ಕಷ್ಟವನ್ನು ಪರಿಹರಿಸಲು ಹಳ್ಳಿಹಳ್ಳಿಗಳಲ್ಲಿ ಆಸ್ಪತ್ರೆಗಳನ್ನು ಕಟ್ಟಿಸುವದೂ ಸುಲಭಕಾರ್ಯವಲ್ಲ ಅದಕ್ಕೆ ಅಪಾರ ಹಣಬೇಕು. ಬ್ರಿಟಿಶ್ ಆಳರಸರು ಅಂತಹ ಯೋಜನೆಗಳನ್ನು ಪುರಸ್ಕರಿಸುವುದೂ ಅಶಕ್ಯ. ಆದುದರಿಂದ ಅಲ್ಪ ವೆಚ್ಚದಲ್ಲಿ ಹಳ್ಳಿಗರಿಗೆ ವೈದ್ಯಕೀಯ ಸೌಕರ್ಯ ದೊರೆವಂತೆ ಮಾಡುವ ಒಂದು ಯೋಜನೆಯನ್ನು ವಿಜಯಲಕ್ಷ್ಮಿ ತಯಾರಿಸಿದಳು ಅದರನ್ವಯ ಹಳ್ಳಿಗಳಲ್ಲಿ ೩೦೦ ಗ್ರಾಮ ಔಷಧಾಲಯಗಳನ್ನು ತೆರೆಯಲು ನಿರ್ಧರಿಸಲಾಯಿತ್ತು. ಆಯುರ್ವೇದ ಮತ್ತು ಯುನಾನಿ ಪದ್ಧತಿಗಳಿಗೇ ಪ್ರೋತ್ಸಾಹ ಕೊಡಲಾಯಿತು. ಪ್ರಾಂತಿಕ ಶಾಸನ ಸಭೆಯಲ್ಲಿ ಅನೇಕ

ಸದಸ್ಯರು ಈ ದೇಶೀ ವೈಗ್ಯಕೀಯ ಪದ್ಧತಿಯನ್ನು ವಿರೋಧಿಸಿದರೂ ಅವಳು ಯೋಜನೆಯನ್ನು ಹಿಂತೆಗೆದುಕೊಳ್ಳಲಿಲ್ಲ. ಅದರಂತೆ ದಾದಿಯರ ತರಬೇತಿ ಕೇಂದ್ರಗಳನ್ನು ತೆರೆಯಲಾಯಿತು. ಮಲೇರಿಯಾ ನಿವಾರಣೆಗಾಗಿ ವ್ಯವಸ್ಥೆ ಮಾಡಿದಳು. ಕುಡಿವ ನೀರಿನ ಬಾವಿಗಳಿಗಾಗಿ ಲಕ್ಷಗಟ್ಟಲೆ ವೆಚ್ಚ ಮಾಡಿದಳು. ಶಿಕ್ಷಣ ಪ್ರಸಾರದ ಹೊಣೆಯನ್ನು ಜಿಲ್ಹಾ ಬೋರ್ಡುಗಳು ಹೆಚ್ಚಾಗಿ ನಿರ್ವಹಿಸುವ ಉದ್ದೇಶದಿಂದ, ಜಿಲ್ಹಾ ಬೋರ್ಡುಗಳ ತಿದ್ದುಪಡಿ ಮಸೂದೆಯನ್ನು ಶಾಸನ ಸಭೆಯಲ್ಲಿ ಮಂಡಿಸಿದಳು. ಮುನಿಸಿಪಾಲಿಟಿಗಳ ಸುಧಾರಣೆಯ ಉದ್ದೇಶದಿಂದ ತಯಾರಿಸಲ್ಪಟ್ಟ ಮತ್ತೊಂದು ಮಸೂದೆಯೂ ಸ್ವೀಕರಿಸಲ್ಪಟ್ಟಿತು.

**ಕಾಂಗ್ರೆಸ್ ಮಂತ್ರಿಮಂಡಲಗಳ ಕಾರ್ಯ**

ಇತ್ತ ಭಾರತದಲ್ಲಿ ಹೊಸ ಹೊಸ ಪ್ರಶ್ನೆಗಳು ಉದಯಿಸಿದುವು. ಕಾಂಗ್ರೆಸ್ ಅಧಿಕಾರ ಸ್ವೀಕರಿಸಿದುದರಿಂದ ದೇಶದಲ್ಲಿ ಸ್ವಲ್ಪ ಶಾಂತ ವಾತಾವರಣ ರೂಪಗೊಂಡುದುದೇನೋ ನಿಜವೇ. ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಿದರು ಸ್ವಲ್ಪ ಮಟ್ಟಿನ ನಾಗರಿಕ ಸ್ವಾತಂತ್ರ್ಯವೂ ಜನರಿಗೆ ಲಭಿಸಿತು. ಕಾಂಗ್ರೆಸ್ ಮಂತ್ರಿಗಳು ಅಹೋರಾತ್ರಿ ದಕ್ಷರಾಗಿ ದುಡಿದರು. ಕೆಲವು ಪ್ರಾಂತಗಳಲ್ಲಿ ಜನಕ್ಕೆ ಹಿತವಾಗುವ ಹೊಸ ಹೊಸ ಯೋಜನೆಗಳೂ ಆಚರಣೆಯಲ್ಲಿ ಬಂದುವು. ಅದು ನಿಜ, ಆದರೆ ಒಟ್ಟಿನಲ್ಲಿ, ಕಾಂಗ್ರೆಸ್ಸಿನ ಆಶೆ ಆಕಾಂಕ್ಷೆಗಳನ್ನು ಸಾಧಿಸಲು ಅಧಿಕಾರ ಸ್ವೀಕಾರದಿಂದ ಅಷ್ಟು ಹಿತವೊದಗಲಿಲ್ಲ. ಹಳೇ ಬ್ರಿಟಿಶ್ ಯಂತ್ರಕ್ಕೇ ಕಾಂಗ್ರೆಸ್ಸಿಗರು ತಮ್ಮ ಹೆಗಲುಕೊಟ್ಟು ಎಳೆಯಬೇಕಾಗಿತ್ತು. ನಿಜವಾದ ಅಧಿಕಾರ ಗವರ್ನರರ ಕೈಯಲ್ಲೇ ಇತ್ತು. ಸರಕಾರೀ ಅಧಿಕಾರಿಗಳೂ ಕಾಂಗ್ರೆಸ್ಸಿಗೆ ವಿರುದ್ಧವಿದ್ದರು. ಒಂದೆರಡು ಪ್ರಾಂತಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳಿಗೂ ಗವರ್ನರರಿಗೂ ತಿಕ್ಕಾಟಗಳೂ ಉಂಟಾದುವು ಈ ಎಲ್ಲ ಅನಾನುಕೂಲತೆಗಳಿಂದ ಕಾಂಗ್ರೆಸ್ ಮಂತ್ರಿಮಂಡಲಗಳ ಪ್ರಗತಿ ಕುಂಠಿತವಾಗುತ್ತ ಬಂದಿತು ಅದರಿಂದ ಜನತೆ ಅಸಮಾಧಾನ ತಾಳಿತು. ಸಾಮ್ರಾಜ್ಯಶಾಹಿಯ ಸಂಕೋಲೆಗಳನ್ನು ಸಂಪೂರ್ಣ ಮುರಿದೊಗೆಯಲು ಜನ ಕಾತುರರಾದರು.

**ಕಾಂಗ್ರೆಸಿನ ಸವಾಲು**

ಕಾಂಗ್ರೆಸ್ಸಿನಲ್ಲಿದ್ದ ಪ್ರಗತಿಪರ ಜನರಿಗೆ ಅಸಮಾಧಾನವಾದುದೂ

ವಿಕಾಸಕ್ಕೆ ಅಡ್ಡಬಂದರೆ ಪ್ರತಿಭಟಿಸಬೇಕು" ಎಂದು ವಿಜಯಲಕ್ಷ್ಮಿ ನುಡಿದಳು. "ಸ್ತ್ರೀಯರ ವಿವಾಹ ವಿಚ್ಛೇದನ ಹಕ್ಕಿಗೆ ವಿಜಯಲಕ್ಷ್ಮಿಯ ಸಂಪೂರ್ಣ ಬೆಂಬಲ" ಎಂದು ಮರುದಿನದ ಪತ್ರಿಕೆಗಳಲ್ಲಿ ದಪ್ಪಕ್ಷರಗಳಿಂದ ಮುದ್ರಿಸಿದ್ದರು "ಶಾರೀರಿಕ ಶಿಕ್ಷಣದ ಬಗ್ಗೆ ನಿಮ್ಮ ಅಭಿಪ್ರಾಯ ಬೇಕು" ಎಂದು ಒಬ್ಬ ಯುರೋಪಿಯನ್ ಪತ್ರಿಕೋದ್ಯೋಗಿ ಪ್ರಶ್ನಿಸಿದನಂತೆ. "ಅದು ಅವಶ್ಯವೆಂದು ನನ್ನ ಮತ. ಆದರೆ ಹಿಂದೀ ಪದ್ಧತಿಯೇ ಒಳ್ಳೆಯುದು" ಎಂದು ವಿಜಯಲಕ್ಷ್ಮಿ ಉತ್ತರ ವಿತ್ತಳು. "ವಿಜಯಲಕ್ಷ್ಮಿ ದಿನಂಪ್ರತಿ ಶೀರ್ಷಾಸನ ಹಾಕಿ ಆಮೇಲೆ ಕೆಲಸಮಾಡಲು ಆರಂಭಿಸುತ್ತಾಳೆ" ಎಂದು ಅವನು ಪ್ರಕಟಿಸಿದ ಇನ್ನೊಬ್ಬ ಬಂದು, "ರಣಜಿತ್ ಪಂಡಿತರನ್ನು ಸೆರೆಮನೆಯಲ್ಲಿ ಭೆಟ್ಟಿಯಾದಮೇಲೆ ಲಗ್ನವಾದಿರಾ?" ಎಂದು ಕೇಳಿದ. ಅವಳು ಲಗ್ನವಾಗಿ ಹತ್ತುವರುಷಗಳ ತರುವಾಯ ಸೆರೆಮನೆಗೆ ತೆರಳಿದ್ದಳು. ಆ ರೀತಿ ಉತ್ತರ ಕೊಟ್ಟರೂ ಆ ಪತ್ರಿಕೋದ್ಯಮಿ ಅದನ್ನು ಮರೆಸಿ, ವಿಜಯಲಕ್ಷ್ಮಿ--ರಣಜಿತ್‌ರವರ ಪ್ರೇಮ ವಿವಾಹದ ಬಗ್ಗೆ ದೊಡ್ಡ ಕಟ್ಟುಕತೆ ಕಲ್ಪಿಸಿ ಬರೆದ.

### ಆಯುರ್ವೇದಕ್ಕೆ ಪ್ರೋತ್ಸಾಹ

ವಿಜಯಲಕ್ಷ್ಮಿ ಮಂತ್ರಿಯಾಗಿದ್ದಾಗಲೇ ಸಂಯುಕ್ತ ಪ್ರಾಂತದಲ್ಲಿ ಆಯುರ್ವೇದಕ್ಕೆ ಅಧಿಕ ಪ್ರೋತ್ಸಾಹ ಕೊಡಲು ಯತ್ನಿಸಿದಳು ಪ್ರಾಂತದಲ್ಲಿ ವೈದ್ಯಕೀಯ ಸೌಕರ್ಯ ಅಷ್ಟು ತೃಪ್ತಿಕರವಿರಲಿಲ್ಲ ಆಸ್ಪತ್ರೆಗಳಿದ್ದುದೂ ಹೆಚ್ಚಾಗಿ ನಗರಗಳಲ್ಲೇ ಅದರಿಂದ ಹಳ್ಳಿಯ ಜನರಿಗೆ ಅನಾನುಕೂಲವೇ ಬಹಳ ಈ ಕಷ್ಟವನ್ನು ಪರಿಹರಿಸಲು ಹಳ್ಳಿಹಳ್ಳಿಗಳಲ್ಲಿ ಆಸ್ಪತ್ರೆಗಳನ್ನು ಕಟ್ಟಿಸುವದೂ ಸುಲಭಕಾರ್ಯವಲ್ಲ ಅದಕ್ಕೆ ಅಪಾರ ಹಣಬೇಕು. ಬ್ರಿಟಿಶ್ ಅರಸರು ಅಂತಹ ಯೋಜನೆಗಳನ್ನು ಪುರಸ್ಕರಿಸುವುದೂ ಅಶಕ್ಯ. ಆದುದರಿಂದ ಅಲ್ಪ ವೆಚ್ಚದಲ್ಲಿ ಹಳ್ಳಿಗರಿಗೆ ವೈದ್ಯಕೀಯ ಸೌಕರ್ಯ ದೊರೆವಂತೆ ಮಾಡುವ ಒಂದು ಯೋಜನೆಯನ್ನು ವಿಜಯಲಕ್ಷ್ಮಿ ತಯಾರಿಸಿದಳು ಆದರನ್ವಯ ಹಳ್ಳಿಗಳಲ್ಲಿ ೩೦೦ ಗ್ರಾಮ ಔಷಧಾಲಯಗಳನ್ನು ತೆರೆಯಲು ನಿರ್ಧರಿಸಲಾಯಿತ್ತು. ಆಯುರ್ವೇದ ಮತ್ತು ಯುನಾನಿ ಪದ್ಧತಿಗಳಿಗೇ ಪ್ರೋತ್ಸಾಹ ಕೊಡಲಾಯಿತು. ಪ್ರಾಂತಿಕ ಶಾಸನ ಸಭೆಯಲ್ಲಿ ಅನೇಕ

ಸದಸ್ಯರು ಈ ದೇಶೀ ವೈಗ್ಯಕೀಯ ಪದ್ಧತಿಯನ್ನು ವಿರೋಧಿಸಿದರೂ ಅವಳು ಯೋಜನೆಯನ್ನು ಹಿಂತೆಗೆದುಕೊಳ್ಳಲಿಲ್ಲ ಅದರಂತೆ ದಾದಿಯರ ತರಬೇತಿ ಕೇಂದ್ರಗಳನ್ನು ತೆರೆಯಲಾಯಿತು ಮಲೇರಿಯಾ ನಿವಾರಣೆಗಾಗಿ ವ್ಯವಸ್ಥೆ ಮಾಡಿದಳು. ಕುಡಿವ ನೀರಿನ ಬಾವಿಗಳಿಗಾಗಿ ಲಕ್ಷಗಟ್ಟಲೆ ವೆಚ್ಚ ಮಾಡಿದಳು. ಶಿಕ್ಷಣ ಪ್ರಸಾರದ ಹೊಣೆಯನ್ನು ಜಿಲ್ಲಾ ಬೋರ್ಡುಗಳು ಹೆಚ್ಚಾಗಿ ನಿರ್ವಹಿಸುವ ಉದ್ದೇಶದಿಂದ, ಜಿಲ್ಲಾ ಬೋರ್ಡುಗಳ ತಿದ್ದುಪಡಿ ಮಸೂದೆಯನ್ನು ಶಾಸನ ಸಭೆಯಲ್ಲಿ ಮಂಡಿಸಿದಳು. ಮುನಿಸಿಪಾಲಿಟಿಗಳ ಸುಧಾರಣೆಯ ಉದ್ದೇಶದಿಂದ ತಯಾರಿಸಲ್ಪಟ್ಟ ಮತ್ತೊಂದು ಮಸೂದೆಯೂ ಸ್ವೀಕರಿಸಲ್ಪಟ್ಟಿತು.

**ಕಾಂಗ್ರೆಸ್ ಮಂತ್ರಿಮಂಡಲಗಳ ಕಾರ್ಯ**

ಇತ್ತ ಭಾರತದಲ್ಲಿ ಹೊಸ ಹೊಸ ಪ್ರಶ್ನೆಗಳು ಉದಯಿಸಿದುವು. ಕಾಂಗ್ರೆಸ್ ಅಧಿಕಾರ ಸ್ವೀಕರಿಸಿದುದರಿಂದ ದೇಶದಲ್ಲಿ ಸ್ವಲ್ಪ ಶಾಂತ ವಾತಾವರಣ ರೂಪಗೊಂಡುದುದೇನೋ ನಿಜವೇ. ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಿದರು ಸ್ವಲ್ಪ ಮಟ್ಟಿನ ನಾಗರಿಕ ಸ್ವಾತಂತ್ರ್ಯವೂ ಜನರಿಗೆ ಲಭಿಸಿತು. ಕಾಂಗ್ರೆಸ್ ಮಂತ್ರಿಗಳು ಅಹೋರಾತ್ರಿ ದಕ್ಷರಾಗಿ ದುಡಿದರು ಕೆಲವು ಪ್ರಾಂತಗಳಲ್ಲಿ ಜನಕ್ಕೆ ಹಿತವಾಗುವ ಹೊಸ ಹೊಸ ಯೋಜನೆಗಳೂ ಆಚರಣೆಯಲ್ಲಿ ಬಂದುವು. ಅದು ನಿಜ, ಆದರೆ ಒಟ್ಟಿನಲ್ಲಿ, ಕಾಂಗ್ರೆಸ್ಸಿನ ಆಶೆ ಆಕಾಂಕ್ಷೆಗಳನ್ನು ಸಾಧಿಸಲು ಅಧಿಕಾರ ಸ್ವೀಕಾರದಿಂದ ಅಷ್ಟು ಹಿತವೊದಗಲಿಲ್ಲ ಹಳೇ ಬ್ರಿಟಿಶ್ ಯಂತ್ರಕ್ಕೇ ಕಾಂಗ್ರೆಸ್ಸಿಗರು ತಮ್ಮ ಹೆಗಲುಕೊಟ್ಟು ಎಳೆಯಬೇಕಾಗಿತ್ತು ನಿಜವಾದ ಅಧಿಕಾರ ಗವರ್ನರರ ಕೈಯಲ್ಲೇ ಇತ್ತು. ಸರಕಾರೀ ಅಧಿಕಾರಿಗಳೂ ಕಾಂಗ್ರೆಸ್ಸಿಗೆ ವಿರುದ್ಧವಿದ್ದರು. ಒಂದೆರಡು ಪ್ರಾಂತಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳಿಗೂ ಗವರ್ನರರಿಗೂ ತಿಕ್ಕಾಟಗಳೂ ಉಂಟಾದುವು ಈ ಎಲ್ಲ ಅನಾನುಕೂಲತೆಗಳಿಂದ ಕಾಂಗ್ರೆಸ್ ಮಂತ್ರಿಮಂಡಲಗಳ ಪ್ರಗತಿ ಕುಂಠಿತವಾಗುತ್ತ ಬಂದಿತು ಅದರಿಂದ ಜನತೆ ಅಸಮಾಧಾನ ತಾಳಿತು. ಸಾಮ್ರಾಜ್ಯಶಾಹಿಯ ಸಂಕೋಲೆಗಳನ್ನು ಸಂಪೂರ್ಣ ಮುರಿದೊಗೆಯಲು ಜನ ಕಾತುರರಾದರು.

**ಕಾಂಗ್ರೆಸಿನ ಸವಾಲು**

ಕಾಂಗ್ರೆಸ್ಸಿನಲ್ಲಿದ್ದ ಪ್ರಗತಿಪರ ಜನರಿಗೆ ಅಸಮಾಧಾನವಾದುದೂ

ಸುಳ್ಳಲ್ಲ. ದಿನನಿತ್ಯದ ಆಡಳಿತೆಯ ಪ್ರಶ್ನೆಗಳಿಂದ ಕಾಂಗ್ರೆಸಿನ ಶಕ್ತಿ ಕುಂದು ತ್ತಿದೆಯೆಂದೂ ಅವರು ಅಭಿಪ್ರಾಯ ಪಟ್ಟರು. ಕಾಂಗ್ರೆಸ್ಸಿನಲ್ಲಿ ಮಂದಗಾಮಿ ಮತ್ತು ಪುರೋಗಾಮಿಗಳೊಳಗೆ ಭಿನ್ನಾಭಿಪ್ರಾಯ ಕೂಡಾ ಬೆಳೆಯುತೊಡ ಗಿತು. ಶ್ರೀ ಸುಭಾಷ ಬೋಸರು ಪುರೋಗಾಮಿಗಳನ್ನು ಸಂಘಟಿಸುವ ಯತ್ನ ಕೂಡಾ ನಡೆಸಿದರು, ಜವಾಹರಲಾಲರೂ ಅಧಿಕಾರ ಸ್ವೀಕಾರದಿಂ ದಾದ ಹಾನಿಯನ್ನು ಕಂಡು ಕುಸಿದ. ಮಹಾತ್ಮರಿಗೆ ತಮ್ಮ ಖೇದವನ್ನು ತಿಳಿ ಸಿದರು "ಕಾಂಗ್ರೆಸ್ ಮಂತ್ರಿಗಳು ಹಳೇ ಪದ್ಧತಿಗೇ ಹೆಚ್ಚಾಗಿ ಹೊಂದಿ ಕೊಂಡು ಹೋಗಲು ಯತ್ನಿಸಿ, ಅದನ್ನೇ ಸಮರ್ಥಿಸುತ್ತ ನಡೆದಂತೆ ತೋರು ತ್ತದೆ. ಇದನ್ನು ಒಂದು ವೇಳೆ ಸಹಿಸಬಹುದು. ಆದರೆ, ಇದರಿಂದ ಕಾಂಗ್ರೆಸ್ಸು ತನ್ನ ಸೇವಾತ್ಯಾಗಗಳಿಂದ ಗಳಿಸಿದ ಸ್ಥಾನಮಾನವನ್ನು ಕಳೆದ್ಯ ಕೊಳ್ಳುತ್ತಿದೆ. ನಾವು ಮಂಕಾಗುತ್ತಿದ್ದೇನೆ" ಎಂದು ಜವಾಹರಲಾಲರು ಬರೆದರು. ಇದರಂತೆ ಇನ್ನೂ ಅನೇಕ ಕಾಂಗ್ರೆಸ ಮುಖಂಡರು ತಮ್ಮ ದುಃಖವನ್ನು ತೋಡಿಕೊಂಡರು ಜನರಲ್ಲಿ ಕೂಡಾ ಅದೇ ಮನೋ ವೃತ್ತಿಯಿದ್ದಿತೆಂದು ಹೇಳಬಹುದು. ಏಕೆಂದರೆ ಮುಂದಿನ ಕಾಂಗ್ರೆಸ್ ಅಧಿವೇಶನದಲ್ಲಿ ಪುರೋಗಾಮಿಗಳಾದ ಶ್ರೀ ಸುಭಾಸ್‌ಚಂದ್ರ ಬೋಸರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆರಿಸಲ್ಪಟ್ಟದುದೇ ಅದಕ್ಕೆ ದಿವ್ಯ ಉದಾಹರಣೆ ಅದರಿಂದ ಕಾಂಗ್ರೆಸ್ಸಿನ ಶಿಬಿರದಲ್ಲಿ ಗಾಳಿ ಯಾವ ಕಡೆ ಬೀಸುತ್ತದೆ ಯೆಂಬುದು ಖಚಿತವಾಯ್ತು. ಅದೇ ಕಾಲಕ್ಕೆ ಸರಿಯಾಗಿ ಯುರೋಪಿ ನಲ್ಲಿ ಯುದ್ಧವು ಆರಂಭವಾದುದರಿಂದ ಪರಿಸ್ಥಿತಿ ಇನ್ನಷ್ಟು ಉಗ್ರಸ್ವರೂ ಪವನ್ನೇ ಧರಿಸಿತು ಪ್ರಾಂತಿಕ ಅಥವಾ ಕೇಂದ್ರ ಶಾಸನಸಭೆಗಳ ಬೆಂಬಲ ವನ್ನು ಪಡೆಯದ ಬ್ರಿಟಿಶ್ ಅಧಿಕಾರಿಗಳು ಹಿಂದುಸ್ಥಾನವನ್ನು ಬ್ರಿಟಿಶ್ ಯುದ್ಧ ಯಂತ್ರಕ್ಕೆ ಜೋಡಿಸಿದರು ಹಿಂದೀ ಜನತೆಯ ಅಭಿಪ್ರಾಯ ವನ್ನು ಬ್ರಿಟಿಶ್ ಅಧಿಕಾರಿಗಳು ಅಲಕ್ಷಿಸಿ ಸ್ವೇಚ್ಛೆಯಿಂದ ಆ ರೀತಿ ವರ್ತಿ ಸಿದುದು ಕಾಂಗ್ರೆಸ್ಸನ್ನು ಕೆರಳಿಸಿತು. ಅದರಲ್ಲೊಂದು ರಾಷ್ಟ್ರೀಯ ಗೌರವದ ಪ್ರಶ್ನೆ ಕೂಡಾ ಅಡಕವಾಗಿದ್ದಿತೆಂದೆನಬಹುದು ತಮ್ಮ ಯುದ್ಧ ಉದ್ದೇ ಶಗಳ ಬಗ್ಗೆ ಕೂಡಾ ಬ್ರಿಟನ್ ಚಕಾರವೆತ್ತಿರಲಿಲ್ಲ "ಫ್ಯಾಸಿಝಂ"ನ್ನು ಕಾಂಗ್ರೆಸ್ಸು ಆದಿಯಿಂದಲೂ ಖಂಡಿಸಿ ತನ್ನ ಧೋರಣವನ್ನು ಸ್ಪಷ್ಟಪಡಿ

ಸಲು ತಪ್ಪಿರಲಿಲ್ಲ. "ನಾಝಿಯಿಸಂ"ದ ವಿರುದ್ಧ ಕತ್ತಿ ಕಟ್ಟಿರುವ ಬ್ರಿಟ ನಿನ ನಿಲುವೇನು? ಬ್ರಿಟಿಶ್ ಸಾಮ್ರಾಜ್ಯವಾದದ ಧೋರಣಕ್ಕೆ ಇನ್ನೂ ಅಂಟಿಕೊಳ್ಳಲಾಗುವುದೇ? ಫ್ಯಾಸಿಝಂ ಮತ್ತು ಇಂಪೀರಿಯಲಿಸಂ (ಸಾಮ್ರಾಜ್ಯವಾದ)ಗಳೆರಡು ಒಂದೇ ನಾಣ್ಯದ ಇಬ್ಬದಿಗಳಲ್ಲವೇ? ಸಾಮ್ರಾ ಜ್ಯವಾದಕ್ಕೆ ತಿಲಾಂಜಲಿ ಎರೆದ ವಿನಾ ಕಾಂಗ್ರೆಸ್ಸು ಜನಧನ ಸಹಾಯ ನೀಡುವುದಾದರೂ ಹೇಗೆ? ಆದುದರಿಂದ ಬ್ರಿಟಿಶರ ಧೋರಣವೇನು? ಎಂದು ಕಾಂಗ್ರೆಸ್ಸು ಸವಾಲು ಹಾಕಿತು.

**ರಾಜೀನಾಮೆ**

ಕಾಂಗ್ರೆಸ್ಸಿನ ಈ ಸವಾಲಿನಿಂದ ಬ್ರಿಟನ್ ತಬ್ಬಿಬ್ಬಾಯಿತು. ಸಾಮ್ರಾಜ್ಯವಾದವನ್ನು ಬಿಟ್ಟುಕೊಡಲು ಅವರು ಸಿದ್ಧರಿರಲಿಲ್ಲ. ಭಾರತ ದಲ್ಲಿದ್ದ ತಮ್ಮ ಹಕ್ಕುಹಿತಗಳನ್ನು ತ್ಯಜಿಸಲು ಅಸಮ್ಮತಿ ಭಾರತದ ಮೇಲಿನ ತಮ್ಮ ಒಡೆತನವನ್ನು ಕಳೆದುಕೊಳ್ಳಲು ಅವರಿಗೆ ಮನಸಿಲ್ಲ. ಭಾರತದ ಸ್ವಾತಂತ್ರ್ಯವನ್ನು ಮನ್ನಿಸುವುದಂತೂ ಅಶಕ್ಯ ಮಾತು. ಅದನ್ನು ಪ್ರಧಾನಮಂತ್ರಿ ಚರ್ಚಿಲ್ಲರು ಮತ್ತೆ ಮತ್ತೆ ಹೇಳಿ ಗಾಯಕ್ಕೆ ಸಾಸಿವೆಯ ನೀರನ್ನು ಚೆಲ್ಲಿದರು ಉದಾತ್ತ ಮತ್ತು ಘನ ತತ್ವಗಳಿಗೆ ಅಂಟಿಕೊಂಡಿದ್ದ ಕಾಂಗ್ರೆಸ್ಸು ಅಧಿಕಾರ ತ್ಯಜಿಸಿತು. ಮಂತ್ರಿಮಂಡಲಗಳು ರಾಜೀನಾಮೆ ಕೊಟ್ಟು ಹೊರಗೆ ಬಂದವು. ದೇಶದಲ್ಲಿ ಗವರ್ನರರಾಜ್ಯ, ಮಿಲಿಟರಿ ಆಡಳಿತೆ, ನಿರಂಕುಶ ಪ್ರಭುತ್ವ ಜಾರಿಗೆ ಬಂದಿತು

**ಯುದ್ಧದ ಗತಿಸ್ಥಿತಿ**

ಯುದ್ಧ ಆರಂಭವಾದ ಮೇಲೆ ಜಾಗತಿಕ ಪರಿಸ್ಥಿತಿಯಲ್ಲೂ ಮಹ ತ್ವದ ಬದಲಾವಣೆಯಾಯಿತು. ರಶಿಯಾ-ಜರ್ಮನಿ ಅನಾಕ್ರಮಣ ಒಪ್ಪಂದ ದಿಂದ ಪಶ್ಚಿಮ ರಾಷ್ಟ್ರಗಳು ತಬ್ಬಿಬ್ಬಾಗಿದ್ದರೆ ಪೋಲಂಡಿನ ನಿರ್ನಾಮ ದಿಂದಲೂ ಆಶ್ಚರ್ಯಚಕಿತವಾದುವು ಹಾಲಂಡ್, ಬೆಲ್ಜಿಯಂ, ಲೆಕ್ಸಂ ಬರ್ಗಗಳೂ ಬಹು ಬೇಗನೆ ನಾಝಿ ಪದತಲದಲ್ಲಿ ಬಿದ್ದು ಹೋದವು. ವಿಶೇಷ ಬಡಿದಾಟವಿಲ್ಲದೆ ಫ್ರಾನ್ಸ್ ಕೂಡಾ ಶರಣು ಬಂದಿತು 'ಡಂಕರ್ಕ್' ನಲ್ಲಿ ಬ್ರಿಟನಿಗೆ ಕೂಡಾ ಮಹತ್ತ್ವದ ಸೋಲಾದಗಿತೆಂದರೆ ತಪ್ಪಲ್ಲ. ಹಿಟ್ಲರನ ಮೊದಲಿನ ಏಟಿಗೇ ಫ್ರಾನ್ಸ್ ಮತ್ತು ಬ್ರಿಟನ್‌ಗಳು ತತ್ತರಿಸಿ ಹೋದುವು

ಹಿಟ್ಲರನಿಂದ ತಮ್ಮ ಅಸ್ತಿತ್ವಕ್ಕೇ ಗಂಡಾಂತರವಿದೆಯೆಂದು ಅವರು ಅರಿಯ ದಿದ್ದುದೇ ಅವರ ಮಹಾಪರಾಧ. ಇದಲ್ಲದೆ ಹಿಟ್ಲರನನ್ನು ಪ್ರತಿಭಟಿಸಲು ಅವಶ್ಯವಿದ್ದ ನೈತಿಕ ಬಲವೂ ಅವರಿಗಿರಲಿಲ್ಲ. ಅವರ ಸ್ವಾತಂತ್ರ್ಯಕ್ಕೆ ಗಂಡಾಂತರ ಬಂದ ಕಾಲದಲ್ಲೂ ತಾವು ಪರರಿಗೆಮಾಡಿದ ಅನ್ಯಾಯದ ಪರಿಮಾರ್ಜನೆ ಮಾಡಲು ಅವರು ಸಿದ್ಧರಾಗಲಿಲ್ಲ. ನೆರೆಯಲ್ಲಿ ತೇಲಿ ಹೋಗುವ ಮನುಷ್ಯನು ಹಸುರು ಹುಲ್ಲಿಗೆ ಕೈಯೊಡ್ಡುವಂತೆ ಅಂತಹ ಸಂಕಟಕಾಲದಲ್ಲೂ ಪಶ್ಚಿಮರಾಷ್ಟ್ರಗಳು ತಮ್ಮ ವಸಾಹತು ಸಾಮ್ರಾಜ್ಯ ಗಳಿಗೆ ಅಂಟಿಕೊಂಡಿದ್ದುವು.

## ವೈಯಕ್ತಿಕ ಸತ್ಯಾಗ್ರಹ

ಬ್ರಿಟನ್ ಮಾಡಿದ್ದ ತಪ್ಪನ್ನು ತೋರಿಸಿಕೊಡಲು ಮಹಾತ್ಮಾ ಗಾಂಧಿ ಯವರ ಇಚ್ಛೆ. ಬ್ರಿಟಿಶರು ಕಣ್ಣು ತೆರೆಯುವಂತೆ ಮಾಡಲು ಅವರ ಆಶೆ. ಅದ ಕ್ಕಾಗಿ ವೈಯಕ್ತಿಕ ಸತ್ಯಾಗ್ರಹದ ಯೋಜನೆಯನ್ನು ತಯಾರಿಸಿದರು. ಯುದ್ಧ ದಲ್ಲಿ ತೊಡಗಿದ್ದ ಬ್ರಿಟಿಶರಿಗೆ ತೊಡಕನ್ನುಂಟು ಮಾಡುವ ಬಯಕೆ ಗಾಂಧೀ ಜಿಯವರಲ್ಲಿ ಎಳ್ಳಷ್ಟೂ ಇರಲಿಲ್ಲ. ಅವರ ಈ ಉದಾತ್ತ ಮನಃ ಪ್ರವೃತ್ತಿ ಯನ್ನು ಅನೇಕರು ವಿರೋಧಿಸಿದರು. ಆದರೂ ವೈಯಕ್ತಿಕ ಸತ್ಯಾಗ್ರಹದ ಯೋಜನೆಯನ್ನು ಯಾರೂ ತಿರಸ್ಕರಿಸಲಿಲ್ಲ. ಸತ್ಯ ಮತ್ತು ಅಹಿಂಸೆಗೆ ಅಂಟಿ ಕೊಂಡ ಕಾಂಗ್ರೆಸ್ಸಿಗರನ್ನು ಮಾತ್ರ ಆರಿಸಿ, ಸತ್ಯಾಗ್ರಹ ಹೂಡಲು ಅನುಮತಿ ಕೊಡಲಾರಂಭಿಸಿದರು. ವಿಜಯಲಕ್ಷ್ಮಿ ಪಂಡಿತ್ ಕೂಡಾ ಈ ಸತ್ಯಾಗ್ರಹ ದಲ್ಲಿ ಸೆರೆಮನೆಗೆ ತೆರಳಿದಳು.

## ರಾಜಾಜಿ ಯೋಜನೆ

ಈ ವೈಯಕ್ತಿಕ ಸತ್ಯಾಗ್ರಹದಿಂದ ಬ್ರಿಟಿಶ್ ಸರಕಾರದ ಮೇಲೆ ಅಷ್ಟು ಪರಿಣಾಮವಾಗಲಿಲ್ಲ. ಜನರೂ ಸ್ವಲ್ಪ ಕಾಲ ಕಳೆದ ಮೇಲೆ ಬೇಸತ್ತರು. ಇದಕ್ಕಿಂತಲೂ ಉಗ್ರವಾದ ಹೋರಾಟಕ್ಕಾಗಿ ಜನ ಚಡಪಡಿಸಲಾರಂಭಿಸಿ ದರು. ಮತ್ತು ರಾಜಕೀಯ ಬಿಕ್ಕಟ್ಟು ಉಗ್ರ ಸ್ವರೂಪವನ್ನೇ ತಾಳಿತು. ಸರಕಾರ ಮತ್ತು ಕಾಂಗ್ರೆಸ್‌ಗಳೊಳಗೆ ಉಗ್ರ ಬಡಿದಾಟವಾಗುವ ಚಿಹ್ನೆಗಳೂ ಕಂಡು ಬಂದುವು. ಈ ಹೋರಾಟವನ್ನು ತಪ್ಪಿಸುವುದಕ್ಕಾಗಿ ರಾಜಾಜಿಯ ವರು ಹೊಸ ಯೋಜನೆಯೊಂದನ್ನು ಮುಂದಿಟ್ಟರು ಅದರನ್ವಯ, ಕೇಂದ್ರ

ದಲ್ಲಿ ತಾತ್ಕಾಲಿಕ ರಾಷ್ಟ್ರೀಯ ಸರಕಾರವನ್ನು ಬ್ರಿಟಿಶರು ಸ್ಥಾಪಿಸತಕ್ಕದ್ದು ಆ ಸರಕಾರ, ಕೇಂದ್ರ ಶಾಸನ ಸಭೆಗೆ ಹೊಣೆಗಾರ ವಿರತಕ್ಕದು ಇದಕ್ಕೆ ಬ್ರಿಟನ್ ಒಪ್ಪಿದರೆ, ಯುದ್ಧ ಪ್ರಯತ್ನದಲ್ಲಿ ಕಾಂಗ್ರೆಸ್ಸು ಸಹಾಯ ನೀಡು ವುದು. ರಾಜಾಜಿ ಯೋಜನೆಯ ಆಶಯವಿದು. ಈ ಯೋಜನೆ ಗಾಂಧೀ ವಿಚಾರ ದ್ರೋಹನಕ್ಕೆ ವ್ಯತಿರಿಕ್ತ, ಕಾಂಗ್ರೆಸ್ ಒಪ್ಪಿಕೊಂಡ ಸತ್ಯ ಮತ್ತು ಅಹಿಂಸಾ ಧೋರಣಕ್ಕೂ ವಿರುದ್ಧವಾದುದು. ಏಕೆಂದರೆ, ಯುದ್ಧ ಪ್ರಯತ್ನಕ್ಕೆ ಸಹಾಯ ನೀಡುವುದೆಂದರೆ, ಹಿಂಸಾತ್ಮಕ ಸಹಾಯ ನೀಡಿದಂತೆಯೇ ಸರಿ. ಕಾಂಗ್ರೆಸ್ಸಿನ ಘನ ಆದರ್ಶಕ್ಕೆ ಅದು ಸರಿಹೊಗುವಂತಹುದಲ್ಲ. ಹೀಗಿದ್ದರೂ ಕೂಡಾ ಬಡಿದಾಟವನ್ನು ತಪ್ಪಿಸಬೇಕೆಂಬ ಲವಲವಿಕೆಯಿಂದ ಕಾಂಗ್ರೆಸ್ಸು ಗಾಂಧೀಜಿಯವರ ಕೈಬಿಟ್ಟು, ರಾಜಾಜಿ ಯೋಜನೆಯನ್ನು ಸ್ವೀಕರಿಸಿತು. ಆದರೆ, ದುರದೃಷ್ಟದಿಂದ ಚರ್ಚಿಲ್ಲರು ಭಾರತದ ಸ್ನೇಹ ಹಸ್ತವನ್ನು ಸ್ವೀಕರಿ ಸಲಿಲ್ಲ. . ಹೋರಾಟ ಅನಿವಾರ್ಯವಾಗಿ ಪರಿಣಮಿಸಿತು.

# ೭. ಹೋರಾಟ

ಬ್ರಿಟನ್ ನಾಝಿಸಂ ಮತ್ತು ಫ್ಯಾಸಿಝಂಗಳ ವಿರುದ್ಧ ಹೊರಾಡುತಿದ್ದರೆ, ಭಾರತವು ಬ್ರಿಟಿಶ್ ಇಂಪೀರಿಯಲಿಸಂ ( ಸಾಮ್ರಾಜ್ಯವಾದ )ದೊಡನೆ ಕಾದಾಡುತಿತ್ತು ಆದರೆ ಕಾಂಗ್ರೆಸ್ಸಿನ ಈ ನಿಲುವು ಆಳುವ ಮಹಾನುಭಾವರಿಗೆ ಅರ್ಥವಾಗಲಿಲ್ಲ. ಅಥವಾ ಬೇಕೆಂದೇ ಅವರು ದೇಶ ವಿದೇಶಗಳಲ್ಲಿ ಅದರಬಗ್ಗೆ ಅಪಪ್ರಚಾರ ಮಾಡುತಿದ್ದರು. ಹಿಟ್ಲರ್ ಮತ್ತು ಮುಸ್ಸೋಲಿನಿಗಳೊಡನೆ ಜವಾಹರಲಾಲರ ಸಂಬಂಧವಿದೆಯೆಂದು ಹಬ್ಬಿಸಿದ ಸುದ್ದಿ ಅಂತಹ ಅಪಪ್ರಚಾರಗಳಲ್ಲಿ ಒಂದಾಗಿದೆ ಜವಾಹರಲಾಲರ ಲೇಖನ, ಭಾಷಣ, ಧೋರಣೆ, ಮನೋವೃತ್ತಿ, ಆದರ್ಶಗಳನ್ನರಿತವರಿಗೆ ಇದು ಎಷ್ಟು ದೊಡ್ಡ ಸುಳ್ಳೆಂದು ಖಚಿತವಾಗದೇ ಇರಲಾರದು. ಅನೇಕ ವರುಷಗಳಿಂದಲೂ ಅವರು ಫ್ಯಾಸಿಝಂನಿಂದ ಎಂತಹ ಗಂಡಾಂತರ ಬರಲಿದೆಯೆಂಬುದನ್ನು ಎಚ್ಚರಿಸಿದ್ದರು ೧೯೩೧ರಲ್ಲಿ ಜಪಾನ್ ಮಂಚೂರಿಯದ ಮೇಲೆ ದಾಳಿ ಮಾಡಿದಾಗಲೇ ಅವರು ಬೊಟ್ಟುಮಾಡಿ ತೋರಿಸಿದರು ಅಬಿಸೀನಿಯದ ಸ್ವಾತಂತ್ರ್ಯಕ್ಕೆ ಚ್ಯುತಿ ಬಂದಾಗ ಅವರ ಕೂಗು ಜಗತ್ತಿನಲ್ಲೇ ಪ್ರತಿಧ್ವನಿತವಾಯಿತು. ಸ್ಪೇನಿನ ಅಂತಃ ಕಲಹದ ಕಾಲದಲ್ಲಿ ಪ್ರಜಾಪ್ರಭುತ್ವ ಪಕ್ಷಕ್ಕೆ ಅವರು ಬಲವಾದ ಬೆಂಬಲ ಕೊಟ್ಟಿದ್ದರು. ಜವಾರಹಲಾಲರು ಇಟಲಿ ಮತ್ತು ಜರ್ಮನಿಗಳಲ್ಲಿ ಸಂಚರಿಸಿದ್ದರೇನೋ ನಿಜ. ಆದರೆ, ಅವರು ಫ್ಯಾಸಿಸ್ಟರ ಅಥವಾ ಅವರನ್ನು ಹೊಗಳುವ ಮನಃ ಪ್ರವೃತ್ತಿಯವರಿರಲಿಲ್ಲ ಭೆಟ್ಟಿಯಾಗಲು ಮುಸ್ಸೋಲಿನಿ ವಿನಂತಿ ಮಾಡಿಕೊಂಡರೂ ನೆಹರು ನಿರಾಕರಿಸಿದ್ದುದುಂಟು. ಹೀಗಿರುವಾಗ ಜವಾರಹಲಾಲರ ಕೀರ್ತಿಗೆ ಕಲಂಕ ಹಚ್ಚಲು ಬ್ರಿಟಿಶರು ಯತ್ನಿಸಿದುದು ಅವರ ಅಜ್ಞಾನದ ನಿದರ್ಶನವಾಗಿದೆ. ಜವಾಹರಲಾಲರು ಸೆರೆಮನೆಯಲ್ಲಿದ್ದಾಗಲೇ ಅವರ ಮೇಲಿನ ಅರೋಪಗಳು ಕೇಳಬಂದುವು ವಿಜಯಲಕ್ಷ್ಮಿ ೧೯೪೧ರ ಎಪ್ರೀಲ್ ತಿಂಗಳಿನಲ್ಲಿ ಒಂದು ವಿಸ್ತೃತ ಹೇಳಿಕೆಯನ್ನು ಹೊರಡಿಸಿ ಆ ಆಧಾರವಿಲ್ಲದ ಸುಳ್ಳಿನಕಂತೆಯನ್ನು ಗಾಳಿಗೆ ತೂರಿದಳು.

## ಬ್ರಿಟಿಶ್ ಕೂಲಿಕಾರರು

ಜವಾಹರಲಾಲರ ಕೀರ್ತಿಗೆ ಕಲಂಕ ತರಲು ಮಾಡಿದ ಈ ಯತ್ನ ಬ್ರಿಟಿಶ್ ಕೂಲಿಕಾರ ಪಕ್ಷದಲ್ಲಿದ್ದ ಕೆಲವು ಸದಸ್ಯರಿಗೆ ರುಚಿಸಲಿಲ್ಲ. ಆದರೆ ಅವರು ಆಗಿನ ಪರಿಸ್ಥಿತಿಯಲ್ಲಿ ಮಾಡುವುದಾದರೂ ಏನು! ಬ್ರಿಟಿಶ್ ಜನಾಂಗಕ್ಕೆ ಭಾರತದ ನಿಜಪರಿಸ್ಥಿತಿ ಆ ವರ್ಷಗಳ ನಿಜಜ್ಞಾನ ಇರಲಿಲ್ಲ. ಬ್ರಿಟನ್ನಿನ ಪತ್ರಿಕೆಗಳು ಭಾರತದ ಪ್ರಶ್ನೆಯನ್ನೆತ್ತಿಕೊಂಡು ಬರೆಯುತ್ತಿದ್ದುದೇ ಕಡಿಮೆ. ಯುದ್ಧ ಪ್ರಯತ್ನ ಯುದ್ಧದ ಸ್ಥಿತಿಗತಿಗಳ ಕಡೆ ಆ ಪತ್ರಿಕೆಗಳ ಲಕ್ಷ್ಯ ಹೆಚ್ಚು; ಜನ ಸಾಮಾನ್ಯರಿಗೂ ಕೂಲಿಕಾರ ಪಕ್ಷದ ಸದಸ್ಯರಿಗೂ ಭಾರತದ ಸ್ವಾತಂತ್ರ್ಯದ ಬಗ್ಗೆ ಸಹಾನುಭೂತಿ ಯಿದ್ದುದು ನಿಜ. ಆದರೆ, ಕೂಲಿಕಾರ ಪಕ್ಷವು ಚರ್ಚಿಲ್ಲರ ಮಂತ್ರಿ ಮಂಡಳದಲ್ಲಿ ಸಹಕರಿಸಿತ್ತು. ಕೂಲಿಕಾರ ಪಕ್ಷದ ಮುಖಂಡರಾಗಿದ್ದ ಆ್ಯಟ್ಲಿ, ಬೆವಿನ್ ಮೊದಲಾದವರು ಮಂತ್ರಿಮಂಡಳದಲ್ಲೂ ಸೇರಿಕೊಂಡಿದ್ದರು. ಚರ್ಚಿಲ್ಲರನ್ನು ವಿರೋಧಿಸುವ ಧೈರ್ಯ ಆಗ ಅವರಿಗಿದ್ದಿಲ್ಲ ಅದನ್ನು ಕಂಡು ಕೆಲವು ಸಹೃದಯರಾದ ಬ್ರಿಟಿಶರೂ ನೊಂದುಕೊಂಡರು. ಕೂಲಿಕಾರ ಮುಖಂಡರು ಪ್ರಜಾಸತ್ತೆ, ಸ್ವಾತಂತ್ರ್ಯ ಪರಿಸಮಾನತೆಗಳ ಗುಣಗಾನ ಮಾಡಲೆತ್ನಿಸಿದಾಗ, "ಭಾರತದ ಸವಾಲಿಗೆ ನಿಮ್ಮ ಉತ್ತರ ವೇನು? ಎಂದು ಪ್ರಶ್ನಿಸುತಿದ್ದರು. ಬಹಿರಂಗ ಸಭೆಗಳಲ್ಲೂ ಈ ಪ್ರಶ್ನೆ ಗಳನ್ನು ಜನತೆ ಕೇಳಲಾರಂಬಿಸಿದರು ಬ್ರಿಟನಿನಲ್ಲಿದ್ದ ಹಿಂದೀ ವಿದ್ಯಾರ್ಥಿಗಳೂ ಪದೇ ಪದೇ ಆ ರೀತಿ ಕೆಣಕುತಿದ್ದರು ಆಗ ಬ್ರಿಟಿಶ್ ಕೂಲಿಕಾರ ಮುಖಂಡರ ಮೋರೆ ಚಿಕ್ಕದಾಗುತಿತ್ತು. ಅವರು ಉತ್ತರ ಕೊಡಲಾರದೆ ಸಭೆಗಳಿಂದ ಎದ್ದುಹೋಗುತ್ತಿದ್ದರು. ಒಮ್ಮೆ ಆ್ಯಟ್ಲಿಯವರು ಅರ್ಧದಲ್ಲೇ ಸಭಾತ್ಯಾಗಮಾಡಿ ಹೋದರೆಂದು ಇಂದಿರಾ ನೆಹರು ವರ್ಣಿಸಿರುವಳು ಯುದ್ಧ ಪೂರ್ವದಲ್ಲಿ ಯುರೋಪಿಗೆ ತೆರಳಿದ್ದ ಇಂದಿರಾ ನೆಹರು ಈ ವಿದ್ಯಮಾನಗಳ ಪ್ರತ್ಯಕ್ಷದರ್ಶಿಯಾಗಿದ್ದಳು

## ಚಿಯಾಂಗ್ ದಂಪತಿಗಳ ಆಗಮನ

೧೯೪೨ ರ ಆರಂಭದಲ್ಲಿ ಚಿಯಾಂಗ್ ದಂಪತಿಗಳು ಭಾರತಕ್ಕೆ ಆಗಮಿಸಿದರು ವಿಜಯಲಕ್ಷ್ಮಿ ಆಮಂತ್ರಣವನ್ನು ಕಳಿಸಿ ಬಹಳ ದಿನಗಳಾಗಿದ್ದುವು. ಚಿಯಾಂಗ್ ದಂಪತಿಗಳು ನೆಹರು ಮನೆತನದ ನಿಕಟ

ಮಿತ್ರರೂ ಆಗಿದ್ದರು. ಜವಾಹರಲಾಲ ನೆಹರೂರವರು ಚೀನವನ್ನು ಸಂದ ರ್ಶಿಸಿ ಜಪಾನರ ವಿರುದ್ಧ ಹೋರಾಡುತ್ತಿದ್ದ ಚೀನಿಯರನ್ನು ಹುರಿದುಂಬಿಸಿ ಬಂದಿದ್ದರು. ಚೀನ ಮತ್ತು ಭಾರತಗಳೊಳಗೆ ಅತ್ಯಂತ ಸ್ನೇಹವಿದ್ದಿ ತೆಂದರೂ ಸರಿಯೆ, ಆ ಸ್ನೇಹ ಇಂದು ನಿನ್ನೆಯದೂ ಅಲ್ಲ. ಅನಾದಿ ಕಾಲದಿಂದ ಎರಡೂ ರಾಷ್ಟ್ರಗಳೊಳಗೆ ಪ್ರೀತ್ಯಾದರಗಳು ಬೆಳೆದು ಬಂದಿವೆ. ಒಂದು ಇನ್ನೊಂದರ ಮೇಲೆ ಯಾವುದೇ ರೀತಿಯ ಆಕ್ರಮಣಶೀಲ ದಬ್ಬಾಳಿಕೆ ಕೈಕೊಂಡಿಲ್ಲ. ಬೌದ್ಧ ಧರ್ಮದ ಸಂದೇಶಬೀರಲು ಚೀನಕ್ಕೆ ತೆರಳಿದ ಬುದ್ಧ ಭಿಕ್ಷುಗಳು ಚೀನಿಯರಾಗಿಯೇ ಉಳಿದು ಬಾಳಿದರು ಪಾಶ್ಚಾತ್ಯ ರಾಷ್ಟ್ರಗಳಧಾರ್ಮಿಕ ಮಿಶ್ಯನರಿಗಳಂತೆ ಬುದ್ಧ ಭಿಕ್ಷುಗಳಲ್ಲಿ ಸಾಮ್ರಾ ಜ್ಯದ ಲವಲೇಶವೂ ಇರಲಿಲ್ಲ. ಅವರ ಕಾಲ ಹೆಜ್ಜೆ ಹಿಡಿದು ಸೈನಿ ಕರೂ ತೆರಳಿರಲಿಲ್ಲ. ಹೀಗಾಗಿ ಚೀನಿ ಜನಾಂಗಕ್ಕೆ ಭಾರತದಮೇಲೆ ಅಪಾರ ಗೌರವ. ಭಾರತಕ್ಕೆ ಬಂದ ಚಿಯಾಂಗ್ ದಂಪತಿಗಳು ಅದೇ ತಮ್ಮ ಭಾವ, ಕೃತಜ್ಞತೆಗಳನ್ನರ್ಪಿಸಿದರು. ಅಖಿಲ ಭಾರತ ಮಹಿಳಾ ಪರಿಷತ್ತಿನ ನೇತೃತ್ವದಲ್ಲಿ ಕೂಡಿದ ಸಭೆಯಲ್ಲಿ ವಿಜಯಲಕ್ಷ್ಮಿ ಪತಿ ಚಿಯಾಂಗರನ್ನು ಸ್ವಾಗತಿಸಿದರು.

**ಇಂದಿರೆಯ ಮದುವೆ**

೧೯೪೨ ರಲ್ಲಿ ನೆಹರು ಮನೆತನ ಸಂತೋಷಪಡುವ ಇನ್ನೊಂದು ಘಟನೆಯೂ ನಡೆಯಿತು ಜವಾಹರಲಾಲರ ಏಕಮಾತ್ರ ಪುತ್ರಿ ಇಂದಿ ರಾಳ ಮದುವೆಯು ನಿಶ್ಚಯವಾಯಿತು. ವರ ಫಿರೋಜ್ ಗಾಂಧಿ. ಯುರೋಪಿನಲ್ಲಿ ಫಿರೋಜ್ ಗಾಂಧಿ ಪ್ರವಾಸಮಾಡಿದ್ದರು. ಸ್ಪೇನಿನ ಅಂತಃ ಕಲಹದ ಕಾಲಕ್ಕೆ ಆ ದೇಶದಲ್ಲಿದ್ದರು. ಆ ಮೇಲೆ ಲಂಡನಿನಲ್ಲಿ ಪತ್ರಿ ಕೋದ್ಯಮಿಯಾಗಿ ಕೂಡಾ ಸ್ವಲ್ಪ ಕಾಲದ ವರೆಗಿದ್ದರು. ನೆಹರು ಮನೆ ತನದ ಎಲ್ಲ ಸದಸ್ಯರೂ ಫಿರೋಜ್ ಗಾಂಧಿಯವರ ಮಿತ್ರರಾಗಿದ್ದರು. ಫಿರೋಜ್ ಗಾಂಧಿ ಕೂಡಾ ರಾಜಕಾರಣದಲ್ಲಿ ಭಾಗವಹಿಸಿದ್ದುದರಿಂದ ಸ್ನೇಹ ಉಂಟಾಗಿತ್ತು. ಪ್ರಾಯಶಃ ಇಂದಿರಾ ನೆಹರು ಫಿರೋಜ್ ಗಾಂಧಿ ಯವರನ್ನು ಭೆಟ್ಟಿಯಾದುದು ಯುರೋಪಿನಲ್ಲೇ ಎಂದು ಕಾಣಿಸುತ್ತಿದೆ. ಸ್ವದೇಶಕ್ಕೆ ಹಿಂತಿರುಗಿದ ಬಳಿಕ ಈ ಮದುವೆಯ ಸುದ್ದಿ ಹಬ್ಬಿತು. ಜವಾ

ಹರಲಾಲರೂ ಒಂದು ಹೇಳಿಕೆಯನ್ನ ಕೊಟ್ಟು ಆ ಸುದ್ದಿಯನ್ನು ಸಮ ರ್ಥಿಸಿದರು. "ಮದುವೆಯ ವಿಷಯದಲ್ಲಿ ತಾಯಿ ತಂದೆ ಯೋಗ್ಯ ಸಲಹೆ ಕೊಡಬಹುದು. ಆದರೆ, ವಧೂವರರನ್ನು ಆರಿಸಿಕೊಳ್ಳುವ ಹಕ್ಕು ಅವ ರದೇ. ಚೆನ್ನಾಗಿ ವಿಚಾರ ಮಾಡಿ ಆ ನಿರ್ಧಾರಕ್ಕೆ ಬಂದಿದ್ದರೆ ತಾಯಿ ತಂದೆ ಅಡ್ಡಿ ಮಾಡಕೂಡದು ಇಂದಿರಾ ಮತ್ತು ಫಿರೋಜ್ ಮದುವೆ ಯಾಗಲು ನಿರ್ಧರಿಸಿದುಕ್ಕೆ ನನ್ನ ಒಪ್ಪಿಗೆ ಮತ್ತು ಆಶೀರ್ವಾದಗಳು. ಗಾಂಧೀಜಿಯವರು ಕೂಡಾ ಹರಸಿದ್ದಾರೆ ಫಿರೋಜ್ ಗಾಂಧಿ ಪಾರ್ಸಿ ಇಂದಿರಾ ಯಾರನ್ನೇ ಆರಿಸಿಕೊಂಡಿದ್ದರೂ ಅದಕ್ಕೆ ನಾನು ಒಪ್ಪಿಕೊ ಳ್ಳುತ್ತಿದ್ದೆ ಉಚ್ಚ ತತ್ವ ಆದರ್ಶಗಳಿಗೆ ಅಂಟಿಗೊಂಡಿರುವ ನಾನು ಅನ್ಯ ಮಾರ್ಗ ಹಿಡಿಯಲಾರೆ" ಎಂದು ಜವಾಹರಲಾಲರು ಸ್ಪಷ್ಟಪಡಿಸಿದರು. ಒಂದು ತಿಂಗಳ ಮೇಲೆ ಆನಂದ ಭವನದಲ್ಲಿ ವಿವಾಹ ಮಹೋತ್ಸವವೂ ನೆರವೇರಿತು ಅನೇಕ ವರುಷಗಳಿಂದ ಒಂದುಗೂಡದ ನೆಹರು ಸಹೋ ದರ ಸಹೋದರಿಯರು ಈ ಸಂದರ್ಭದಲ್ಲಿ ಕೂಡಿ, ಸುಖದುಃಖಗಳನ್ನು ಸ್ಮರಿಸಿಕೊಂಡರು ಆನಂದ ಭವನದ ವೈಭವವು ಕರಗಿದ್ದರೂ ಆ ಭವ್ಯ ಮನೆಯಲ್ಲಿ ಎಲ್ಲರೂ ಕೂಡಿ ಒಂದೆರಡು ದಿನಗಳವರೆಗೆ ನಲಿಯುವದೂ ಒಂದು ಭಾಗ್ಯವೇ ಹಿಂದಿನ ಸವಿಸ್ಮರಣೆಗಳೇ ಜೀವನವನ್ನು ಆನಂದ ಗೊಳಿಸಲು ಸಾಕು.

## "ಚಲೇ ಜಾವ್" ಚಳವಳಿ

ಸುಖ ಸಂತೋಷ ಸದಾಕಾಲವಿಲ್ಲ. ಸುಖದ ನೆರಳು ದುಃಖ ಸುಖ ಬೆನ್ನಿನಲ್ಲಿ ಕಷ್ಟ ಪರಂಪರೆಗಳನ್ನು ಸೆರಗಿನಲ್ಲಿ ಕಟ್ಟಿಕೊಂಡು ಬಂದಿತು ಗಾಂಧೀಜಿ "ಚಲೇ ಜಾವ್" ಚಳವಳಿಯನ್ನು ಹೂಡಿದರು. ಬ್ರಿಟಿಶರ ದಬ್ಬಾಳಿಕೆಯಿಂದ ಸಹನೆಗೆಟ್ಟ ಕಾಂಗ್ರೆಸ್ಸು ಬಹಿರಂಗ "ಅಹಿಂಸಾ ತ್ಮಕ ಬಂಡಾಯ"ವನ್ನೇ ಹೂಡಲು ಕಹಳೆ ಮೊಳಗಿತು. ಬ್ರಿಟಿಶರು ಭಾರತದಿಂದ ಸಂಪೂರ್ಣ ತೊಲಗಬೇಕೆಂದೇ ಕಾಂಗ್ರೆಸ್ಸಿನ ಬೇಡಿಕೆ. ೧೯೪೨ರ "ಚಲೇಜಾವ್" ಗೊತ್ತುವಳಿಯ ಆಶಯ ಅದೇ ಹಿಂದುಸ್ತಾನದ ಸ್ವಾತಂ ತ್ರ್ಯಕ್ಕಾಗಿ "ಮಾಡಿರಿ ಇಲ್ಲವೇ ಮಡಿಯಿರಿ" ಎಂಬ ಸಂದೇಶವನ್ನು ಗಾಂಧೀಜಿ ಕೊಟ್ಟರು ಗೊತ್ತುವಳಿ ಸ್ವೀಕರಿಸಲ್ಪಟ್ಟಕೂಡಲೇ ಬ್ರಿಟಿಶ್

ಸರಕಾರವು ಗಾಂಧೀಜಿಯವರನ್ನೂ ಇನ್ನಿತರ ಕಾಂಗ್ರೆಸ್ ಮುಖಂಡರನ್ನೂ ಬಂಧಿಸಿ ಅಜ್ಞಾತ ಸ್ಥಳಕ್ಕೊಯ್ದಿತು. ಅಹಿಂಸಾತ್ಮಕ ಹೋರಾಟದ ಮಾರ್ಗದರ್ಶನ ಮಾಡಲು ಗಾಂಧೀಜಿಯವರಿಗೆ ಅವಕಾಶವನ್ನು ಕೊಡಲಿಲ್ಲ ಇದು ಬಂಡಾಯವೆಂದು ಬ್ರಿಟಿಶರು ತಿಳಿದರು. ಎಲ್ಲ ಕಡೆಗಳಲ್ಲೂ ದೊಡ್ಡದೊಡ್ಡ ಮುಖಂಡರು ಬಂಧಿಸಲ್ಪಟ್ಟರು. ಮಿಲಿಟರಿ ಮತ್ತು ಪೋಲೀಸ್ ರಾಜ್ಯವೇ ಆರಂಭವಾಯಿತು ಬ್ರಿಟಿಶರ ಈ "ಆಹ್ವಾನ"ವನ್ನು ಜನಾಂಗವು ಸ್ವೀಕರಿಸದೇ ಬಿಡಲಿಲ್ಲ ದಬ್ಬಾಳಿಕೆಯಿಂದ ಜನ ಕಂಗೆಟ್ಟಿತು ಸಿಡಿದೆಬ್ಬಿತೆಂದರೂ ಸರಿಯೇ. ಮುಖಂಡರ ಬಂಧನದಿಂದ ಕೂಡಾ ಜನರು ರೊಚ್ಚಿಗೆದ್ದರು. ಚಳವಳಿ ಉಗ್ರ ರೂಪ ತಾರವನ್ನೇ ಧರಿಸಿತು. ಎಲ್ಲ ಕಡೆಗಳಲ್ಲೂ ಜನ ರೇಲ್ವೆ ಹಳಿಗಳನ್ನು ಕಿತ್ತೊಗೆದರು. ತಂತಿಗಳನ್ನು ಕಡಿದೊಗೆದರು ಪೋಲೀಸ್ ಕಚೇರಿಗಳು ಅಗ್ನಿಗೆ ಆಹುತಿಯಾದವು. ಜನರಮೇಲೆ ಲಾಠಿಪ್ರಹಾರ, ಗೋಳೀಬಾರ್ ದಿನನಿತ್ಯದ ಘಟನೆಗಳಾದವು. ಆದರೂ ಅದರಿಂದ ಜನರನ್ನು ಬಗ್ಗುಬಡಿಯಲು ಸರಕಾರಕ್ಕೆ ಶಕ್ಯವಾಗಲಿಲ್ಲ

**ಮಧ್ಯರಾತ್ರಿ ಪೋಲೀಸರು**

ಆಗಸ್ಟ ೧೨ ನೇ ತಾರೀಖಿನ ದಿನ ಮಧ್ಯರಾತ್ರಿ ಎರಡು ಗಂಟೆಗೆ ಪೋಲೀಸರ ಒಂದು ದೊಡ್ಡ ಪಡೆಯೇ ಆನಂದ ಭವನಕ್ಕೆ ಮುತ್ತಿಗೆ ಹಾಕಿತು. ಆಗ ತಾನೇ ವಿಜಯಲಕ್ಷ್ಮಿಗೆ ಕಣ್ಣು ಜೊಂಪು. ಏಕೆಂದರೆ ಹಾಸಿಗೆಗೆ ತೆರಳುವಾಗಲೇ ಮಧ್ಯರಾತ್ರಿಯಾಗಿತ್ತು ಅದೇದಿನ ಸಂಜೆ ವಿದ್ಯಾರ್ಥಿಗಳ ಮೇಲೆ ಗುಂಡುಗಳ ಮಳೆಗರೆದಿದ್ದುದರಿಂದ ಅದನ್ನೇ ಯೋಚಿಸುತ್ತಿದ್ದಳು. ಹೀಗಾಗಿ ಬೇಗನೇ ನಿದ್ದೆಬಂದಿರಲಿಲ್ಲ. ಮಕ್ಕಳಿಗೆ ಮಾತ್ರ ಗಾಢ ನಿದ್ದೆ. ಪೋಲೀಸರು ಬಂದ ಮೇಲೆ ಮಕ್ಕಳೂ ಕಣ್ಣೊರಸಿಕೊಳ್ಳುತ್ತ ಎದ್ದುವು. ತಾಯಿಯು ಹಾಸಿಗೆಯನ್ನು ಮಕ್ಕಳೇ ಕಟ್ಟಿ ಸಿದ್ಧಗೊಳಿಸಿದರು. ಚಿಕ್ಕ ಮಗು ರೀತಾಳ ಕಣ್ಣುಗಳು ಕಂಬನಿಯಿಂದ ತುಂಬಿದುವು. ಮಕ್ಕಳನ್ನು ನೋಡಿಕೊಳ್ಳಲು ಆನಂದ ಭವನದಲ್ಲಿ ಹಿರಿಯರು ಯಾರೂ ಇದ್ದಿಲ್ಲ. ಇಂದಿರಾ ಗಾಂಧಿ ಅಂದೇ ಸಂಜೆ ಬಂದಿದ್ದುದರಿಂದ ವಿಜಯಲಕ್ಷ್ಮಿಗೆ ಸ್ವಲ್ಪ ಧೈರ್ಯ ಅದೇನಿದ್ದರೂ ಅಂತಹ ಅನಿಶ್ಚಿತ ವಾತಾ

ವರಣದಲ್ಲಿ ಎರಡು ಮೂರು ಹೆಣ್ಣುಮಕ್ಕಳನ್ನು ಬಿಟ್ಟು ಕಾರಾಗೃಹಕ್ಕೆ ತೆರಳುವುದೆಂದರೆ ಅದು ಸಾಹಸದ ಮಾತೇ ಸರಿ. ಯಾವ ತಾಯಿಯ ಹೃದಯವಾದರೂ ಅಂಜದೇ ಇರಲಾರದು. "ನೀನು ಹೆದರ ಬೇಡ" ಎಂದು ತಾರಾ ತಾಯಿಗೆ ಧೈರ್ಯ ಹೇಳಿದಳು.

**ಸೈನಿ ಸೆರೆಮನೆ**

ರಾತ್ರಿ ಕಾಲದಲ್ಲೇ ಪೋಲೀಸರು ವಿಜಯಲಕ್ಷ್ಮಿಯನ್ನು ಸೈನಿ ಸೆರೆಮನೆಗೆ ತಂದು ಒಪ್ಪಿಸಿದರು. ಪುನಃ ತನ್ನ ಹಳೆಯ ಕೊಠಡಿಯಲ್ಲಿ ಅವಳ "ಬಿಡಾರ"ವಾಯಿತು. ಅಲ್ಲಿಯ ಕಷ್ಟಪರಂಪರೆಗಳು ಅಷ್ಟಿಷ್ಟಲ್ಲ. ಸೆರೆಮನೆಯಲ್ಲಿ ಮೊದಲನೇ ದಿನ ನೀರೇ ದೊರೆಯಲಿಲ್ಲ. ಆಹಾರ ವಸ್ತುಗಳೂ ಇಲ್ಲ. ಅಡಿಗೆ ಸಾಮಾನುಗಳನ್ನು ಹೊರಗಿಂದ ತರಿಸಿಕೊಂಡರೆ ಅದನ್ನು ಬೇಯಿಸಲು ಇದ್ದಲಿಯಿರಲಿಲ್ಲ. ತಂದುಕೊಟ್ಟ ಸೌದೆಗೆ ಬೆಂಕಿ ಹತ್ತಲಿಲ್ಲ. ಓದಲು ಕುಳಿತರೆ ಕ್ರಿಮಿಕೀಟಗಳ ಕಾಟ. ಆಮೇಲೆ ಮಳೆಬಂದಿತು. ನೀರು ಹೊರಗೆ ಹರಿದು ಹೋಗಲು ಒಪ್ಪದೆ ಕೊಠಡಿಯೊಳಗೇ ಇಳಿಯಿತು. ಪತ್ರ ವ್ಯವಹಾರ, ಭೇಟಿ, ಸೌಕರ್ಯಗಳನ್ನು ರದ್ದುಗೊಳಿಸಿದರು. ಹಾಗಿದ್ದರೂ ಹೊರಗಿನ ವಿಶೇಷ ಸುದ್ದಿಗಳು ಗೊತ್ತಾಗುತ್ತಿದ್ದುವು. ಮಹದೇವ ದೇಸಾಯರ ನಿಧನದ ವಾರ್ತೆ ಕೂಡಾ ಸೈನಿ ಸೆರೆಮನೆಯಲ್ಲಿ ಪ್ರತಿಧ್ವನಿತವಾಯಿತು.

**ಸಾವಿನ ಸಂಕಟ**

ಮಹದೇವ ದೇಸಾಯರು ಹೃದಯ ವಿಕಾರದಿಂದ ಅಗಸ್ಟ ೧೫ನೇ ದಿನ ಸೆರೆಮನೆಯಲ್ಲೇ ಪ್ರಾಣಬಿಟ್ಟರು. ಪ್ರಾಯಶಃ ಬ್ರಿಟಿಶರು ನಡೆಸಿದ ಅತ್ಯಾಚಾರದಿಂದ ಅವರಿಗೆ ಬಹಳ ದುಃಖವಾಗಿರಬೇಕು. ಆದರೆ ಅವರ ನಿಧನದಿಂದ ಇಡೀ ಭಾರತವೇ ಶೋಕ ಸಾಗರದಲ್ಲಿ ಮುಳುಗಿತು. ಸೈನಿ ಸೆರೆಮನೆಯೂ ಆ ಸಾವಿನ ಸಂಕಟವನ್ನು ಅನುಭವಿಸಿತು. ಅದೇ ಯೋಚನೆ ವಿಜಯಲಕ್ಷ್ಮಿಗೆ. "ಮಹದೇವ ದೇಸಾಯರ ಹೆಂಡತಿ ಮತ್ತು ಮಗ ಏನಾದರು? ಅವರಿಗೆ ಸ್ವಂತ ಮನೆಯೂ ಇಲ್ಲ" ಎಂದು ಅವಳ ಚಿಂತೆ. ದೇಸಾಯರು ಆನಂದ ಭವನಕ್ಕೆ ಬಂದು ರಣಜಿತ್ ಪಂಡಿತರ ಪರಿಚಯ ಮಾಡಿಕೊಟ್ಟಂದಿನಿಂದ ಇಷ್ಟರವರೆಗೆ ನಡೆದ ಘಟನೆಗಳೂ ಚಿತ್ರಗಳಂತೆ ಕಣ್ಮುಂದೆ ಕಟ್ಟಿ

ದುವು. ವಿಜಯಲಕ್ಷ್ಮಿ ರಣಜಿತರವರ ಮದುವೆಗೆ ಮಹದೇವ ದೇಸಾಯರೇ ಕಾರಣ ಅವರಿಬ್ಬರೂ ಪರಮ ಮಿತ್ರರು. ಮಿತ್ರನ ಮರಣದಿಂದ ರಣಜಿತ್‌ಗೆ ಎಷ್ಟು ನೋವಾಗುವುದೋ ಏನೋ ಎಂದು ವಿಜಯ ಲಕ್ಷ್ಮಿಯ ಕಳವಳ

**ರಿತು ಸಂಹಾರ**

ರಣಜಿತ್‌ರನ್ನು ವಿಜಯಲಕ್ಷ್ಮಿ ಸ್ಮರಿಸುತ್ತಿದ್ದಂತೆಯೇ ಒಂದು ದಿನ ಸೆರೆ ಮನೆಯಲ್ಲಿ ಅವರ ದರ್ಶನವಾಯಿತು ರಣಜಿತರನ್ನು ಬಂಧಿಸಿದ್ದರು ಮಕ್ಕಳನ್ನು ಕರೆದೊಯ್ಯಲು ಅವರು ಮುಂಬಯಿಯಿಂದ ಆನಂದ ಭವನಕ್ಕೆ ಬಂದಿದ್ದರು. ಚಂದ್ರಲೇಖಾ ಇರಲಿಲ್ಲ ಅವಳನ್ನೂ ಸೆರೆಹಿಡಿಯಲಾಗಿತ್ತು. ತಾರಾ ಮತ್ತು ರೀತಾ ತಂದೆಯನ್ನು ಜೈಲಿಗೆ ಬೀಳ್ಕೊಳ್ಳಬೇಕಾಯ್ತು ನೈನಿ ಸೆರೆಮನೆಯಲ್ಲಿ ರಣಜಿತ್ ಹೂವಿನ ತೋಟ ಬೆಳೆಸಲಾರಂಭಿಸಿದರು ವೈಯಕ್ತಿಕ ಸತ್ಯಾಗ್ರಹದ ಕಾಲಕ್ಕೆ ಅವರು ಹಾಕಿದ್ದ ಬೀಜಗಳು ಮೊಳೆತು, ಸಸಿಗಳಾಗಿ ಹೂ ಬಿಟ್ಟಿದ್ದುವು ಆ ಹೂಗಳೊಂದಿಗೆ ಹೊಸ ಗಿಡಗಳನ್ನು ಬೆಳೆಸಲು ವಿಜಯ ಲಕ್ಷ್ಮಿಗೆ ವಿವಿಧ ಹೂಗಳ ಬೀಜಗಳನ್ನೂ ಕಳಿಸಿದರು ಆಗಾಗ ಗಂಡ-ಹೆಂಡತಿಯ ಭೆಟ್ಟಿಗೂ ಅವಕಾಶ ಸಿಗುತ್ತಿತ್ತು. ಒಮ್ಮೊಮ್ಮೆ ಸೆರೆಮನೆಯ ಅಧಿಕಾರಿಗಳು ಆ ದಿನವನ್ನೇ ಮರೆತು ಬಿಡುತ್ತಿದ್ದರು. ಆದರಿಂದ ವಿಜಯ ಲಕ್ಷ್ಮಿ ಬಹಳ ನೊಂದುಕೊಳ್ಳುತ್ತಿದ್ದಳು ಭೆಟ್ಟಿಯ ಸವಲತ್ತು ಕೂಡ ಬೇಕೆಂದು ಕೇಳಿಕೊಳ್ಳುತ್ತಿದ್ದಳು. ಇದು ರಣಜಿತರಿಗೆ ಗೊತ್ತಾಗಿ ಅವರು ಹೆಂಡತಿಯನ್ನು ಗದರಿಸಿ, "ಏನೂ ಸವಲತ್ತು ಕೇಳಬೇಡ ಸಹಿಸಿಕೋ" ಎಂದರು. ಒಮ್ಮೆ ಭೆಟ್ಟಿಯಾದಾಗ "ರಿತು ಸಂಹಾರ"ದ ಇಂಗ್ಲೀಷ್ ಭಾಷಾಂತರದ ಕೆಲವು ಸುಂದರವಾದ ವಾಕ್ಯಗಳನ್ನು ವಿಜಯಲಕ್ಷ್ಮಿಗೆ ಓದಿ ತೋರಿಸಿದರು.

**ಅಮೇರಿಕೆಗೆ ಪ್ರಯಾಣ**

ಒಂದು ವರುಷವಾದ ಮೇಲೆ ಚಂದ್ರಲೇಖಾ ಮುಕ್ತಳಾದಳು ತಾಯಿ ತಂದೆ ಸೆರೆಮನೆಗಳಲ್ಲಿದ್ದುದರಿಂದ ಅವರ ಯೋಗಕ್ಷೇಮ ನೋಡಿಕೊಳ್ಳುವವರಿರಲಿಲ್ಲ ಶಿಕ್ಷಣವೂ ಅರ್ಧದಲ್ಲೇ ನಿಂತಿತ್ತು. ಭಾರತದಲ್ಲಿ ಶಿಕ್ಷಣ ಪಡೆಯುವುದೂ ದುಸ್ತರ. ನೆಹರೂ ಮನೆತನದವರ ಮೇಲೆ ಅಧಿಕಾರಿಗಳದ್ದು

ದೃಷ್ಟಿ ವಕ್ರ. ಯಾವ ದಿನವಾದರೂ ಹಿಡಿದು ಸೆರೆಮನೆಗೆ ಕಳಿಸಿದರೂ ಕಳಿಸಿದರೇ. ವಾತಾವರಣವೇ ಅನಿಶ್ಚಿತ ಆದುದರಿಂದ ಅಮೇರಿಕೆಗೆ ಕಳಿಸಲು ವಿಜಯಲಕ್ಷ್ಮಿಯು ಆಶೆ ಪ್ರವೇಶ ಕೊಡಬೇಕೆಂದು ಅಮೇರಿಕದ ವೆಲ್ಲೆಸ್ಲಿ ಕಾಲೇಜಿಗೂ ವಿಜಯಲಕ್ಷ್ಮಿ ತಂತಿ ಕಳಿಸಿದಳು ಅಡ್ಡಿಯಿಲ್ಲವೆಂದು ಒಂದುದಿನದೊಳಗೇ ಉತ್ತರ ಬಂದಿತು. ಆ ಮೇಲೆ ಹಿರಿ ಮಗಳು ಚಂದ್ರಲೇಖಾ ಹೊರಡಲನುವಾದಳು ಒಬ್ಬಳೇ ಹುಡುಗಿಯನ್ನು ಅಷ್ಟುದೂರ ಕಳಿಸುವುದಾದರೂ ಹೇಗೆ? ಬೇನೆ ಬೇಸರ ಬಂದರೆ ಯಾರಿದ್ದಾರೆ? ಆದುದರಿಂದ ತಂಗಿ ತಾರಾ ಕೂಡಾ ಹೊರಟಳು. ಅವರಿಬ್ಬರೂ ಅಮೇರಿಕೆಗೆ ಮುಟ್ಟುವ ವರೆಗೆ ಎಲ್ಲರಿಗೂ ಆತುರ. ಜರ್ಮನ್ ಜಲಾಂತರ್ಗಾಮಿಗಳು ಹಡಗವನ್ನು ಮುಳುಗಿಸಿದರೆ ಗತಿ ಏನೆಂದು ತಾಯಿ ತಂದೆ ಜೇಲಿನಲ್ಲಿ ಚಿಂತಿಸುತಿದ್ದರು. ಸುರಕ್ಷಿತವಾಗಿ ಮುಟ್ಟಿದ ತಂತಿ ಬಂದ ಮೇಲೆ ಸ್ವಲ್ಪ ಮನಸ್ಸಿಗೆ ಶಾಂತಿ ದೊರೆಯಿತು.

# ೮. ಅಮೇರಿಕದಲ್ಲಿ ಸಂಚಾರ

ಅಮೇರಿಕನ್ನರು ಸ್ವಾತಂತ್ರ್ಯಪ್ರಿಯರು. ತಮ್ಮ ಸ್ವಾತಂತ್ರ್ಯಕ್ಕಾಗಿ ಅವರು ಬ್ರಿಟಿಶರೊಡನೆ ಹೋರಾಡಿ ಯಶ ಸಂಪಾದಿಸಿದ್ದರು ಆದುದರಿಂದ ಸ್ವಾತಂತ್ರ್ಯಕ್ಕಾಗಿ ಹೋರಾಡುವವರ ಮೇಲೆ ಅವರಿಗೆ ಸಹಾನುಭೂತಿಯುಂಟಾಗುವುದು ಸಹಜವೇ. ಗಾಂಧೀಜಿಯವರ ನಾಯಕತ್ವದಲ್ಲಿ ಭಾರತವು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವುದನ್ನು ಅಮೇರಿಕನ್ನರು ಕುತೂಹಲದಿಂದ ನಿರೀಕ್ಷಿಸುತ್ತಿದ್ದರು. ಬಹು ಜನರಿಗೆ ಮಹಾತ್ಮರ ಸತ್ಯ ಮತ್ತು ಅಹಿಂಸೆಗಳು ಅರ್ಥವಾಗುತಿದ್ದಿಲ್ಲ. ಅದರ ನಿಜವಾದ ಪರಿಜ್ಞಾನವೂ ಇಲ್ಲ ಅದರ ನೆಲೆಬೆಲೆಯನ್ನು ಅರಿತವರು ಕೆಲವರು ಮಾತ್ರ ಹೀಗಿದ್ದರೂ ಭಾರತದ ಮೇಲೆ ಅಪಾರವಾದ ಸಹಾನುಭೂತಿ ಇದ್ದುದು ನಿಜ "ಭಾರತಕ್ಕೆ ಸ್ವಾತಂತ್ರ್ಯ ಕೊಡಿ" ಎನ್ನುವ ಚಳವಳಿ ಕೂಡಾ ದಿನದಿಂದ ದಿನಕ್ಕೆ ಪ್ರಬಲಗೊಳ್ಳುತ್ತಿತ್ತು. ಇದನ್ನು ಕಂಡ ಬ್ರಿಟನ್ ಗಾಬರಿಗೊಂಡಿತು.

**ಬ್ರಿಟಿಶರ ಭಯ**

ಬ್ರಿಟಿಶರಿಗೆ ಒಳಗಿಂದೊಳಗೆ ಅಮೇರಿಕನ್ನರ ಭಯ. ಅಮೇರಿಕದ ಮಿಲಿಟರಿ ಶಕ್ತಿಯಿಂದ ಆ ಅಂಜಿಕೆ ಹುಟ್ಟಿರಲಿಲ್ಲ. ಭಾರತದ ಸ್ವಾತಂತ್ರ್ಯ ಪ್ರಶ್ನೆಯಲ್ಲಿ ಅಮೇರಿಕ ಕೈ ಹಾಕುವದೋ ಏನೋ ಎಂಬ ಸಂಶಯವೇ ಆ ಭಯಕ್ಕೆ ಕಾರಣವಾಗಿತ್ತು ಏಕೆಂದರೆ, ಪ್ರಜಾಸತ್ತೆ ಪ್ರಜಾಸ್ವಾತಂತ್ರ್ಯ, ಪ್ರಜಾರಾಜ್ಯಗಳ ಘನ ಉದ್ದೇಶಗಳಿಗಾಗಿ ಫ್ಯಾಸಿಝಂದ ವಿರುದ್ಧ ತಾವು ಹೋರಾಡುತ್ತಿರುವೆಂದು ಬ್ರಿಟಿಶರು ಮೊದಲಿನಿಂದಲೂ ಹೇಳುತ್ತ ಬಂದಿದ್ದರು ಆ ಗುಲ್ಲನ್ನೆಬ್ಬಿಸಿ ಅಮೇರಿಕವನ್ನೊಲಿಸಿಕೊಂಡು ಯುದ್ಧೋಪಕರಣಗಳನ್ನು ಪಡೆದರು ಆಮೇಲೆ ಕಡ ಮತ್ತು ಒತ್ತಿ ಕಾಯದೆಯನ್ವಯ ಸಹಾಯ ಸಲಕರಣೆಗಳು ಲಭಿಸಿದುವು. ಕೊನೆಗೆ ಅಮೇರಿಕನ್ನರು ಬ್ರಿಟಿಶರೊಂದಿಗೆ ರಣರಂಗದಲ್ಲಿ ಹೆಗಲಿಗೆ ಹೆಗಲು ಕೊಟ್ಟು ನಿಂತರು ಹೀಗಿರುವಾಗ ಬ್ರಿಟಿಶರೇ ಆ ಘನ ತತ್ವಗಳನ್ನು ಗಾಳಿಗೆ ತೂರಿ ವಸಾಹತುಗಳಲ್ಲಿ ದಬ್ಬಾಳಿಕೆ ಕೈಕೊಂಡು

ಡುದು ಅಮೇರಿಕನ್ನರಿಗೆ ಗೊತ್ತಾದರೆ ಅವರು ನೊಂದುಕೊಳ್ಳುವುದು ನಿಶ್ಚಯ. ದಬ್ಬಾಳಿಕೆಯನ್ನು ಅವರು ತಡೆಯಬಹುದು. ಇಲ್ಲದಿದ್ದರೆ ಆ ಅನ್ಯಾಯದ ಪರಿಮಾರ್ಜನ ಮಾಡಲು ಒತ್ತಾಯ ಮಾಡಬಹುದು. ಒಂದು ವೇಳೆ ಹಾಗೆ ಸಂಭವಿಸಿದರೆ, ಭಾರತವು ತಮ್ಮ ಕೈ ಬಿಟ್ಟು ಹೋಗಬಹುದೆಂದೂ ಅವರ ಕಳವಳ

**ಅಪ ಪ್ರಚಾರ**

ಆದುದರಿಂದ ಭಾರತದ ಸ್ವಾತಂತ್ರ್ಯ ಹೋರಾಟದ ಬಗ್ಗೆ ತಪ್ಪು ಕಲ್ಪನೆ ಅಮೇರಿಕನ್ನರಲ್ಲಿ ಉಂಟಾಗುವಂತೆ ಬ್ರಿಟಿಶರು ಪ್ರಚಾರ ನಡೆಸಲಾರಂಭಿಸಿದ್ದರು. ಬ್ರಿಟಿಶ್ ಆಡಳಿತೆಯನ್ನು ಪ್ರಶಂಶಿಸುವ ತಂತ್ರ ಅವರದು. ಹಿಂದೀ ಕಾಂಗ್ರೆಸ್ ಮುಖಂಡರನ್ನು ಫ್ಯಾಸಿಸ್ಟರಿಗೂ ಹೋಲಿಸುತ್ತಿದ್ದರು. ಭಾರತಕ್ಕೆ ಸಾಮಂತ ಸ್ವರಾಜ್ಯದ ಸ್ಥಾನಮಾನ ಕೊಡಲಾಗಿದೆಯೆಂದೂ ಅವರ ತಿರುಬೊಬ್ಬೆ. ಅಮೇರಿಕನ್ನರಿಗೆ ನಿಜವಾದ ಭಾರತದ ಸ್ಥಿತಿಗತಿ ಗೊತ್ತಾಗದಂತೆ ಮಾಡುವುದೇ ಅವರ ಉದ್ದೇಶ. ಅದಕ್ಕಾಗಿ ನಡೆಸಿದ ಪ್ರಚಾರಕ್ಕೆ ಕೋಟಿಗಟ್ಟಲೆ ಹಣವನ್ನು ವರುಷಂಪ್ರತಿ ವೆಚ್ಚ ಮಾಡುತಿದ್ದರು. ಬ್ರಿಟಿಶರ ಅಧೀನವಿದ್ದ ಹಿಂದುಸ್ತಾನ ಸರಕಾರವೊಂದೇ ವರುಷಂಪ್ರತಿ ೨೫ ಲಕ್ಷ ರೂಪಾಯಿಗಳನ್ನು ಸುರಿಯುತಿತ್ತು. ಬ್ರಿಟಿಶ್ ಸರಕಾರವು ಒಂದು ಕೋಟಿ ಡಾಲರುಗಳನ್ನು ಅದಕ್ಕಾಗಿ ವಿನಿಯೋಗಿಸಿತ್ತು. ಅವರ ವಿರೋಧಿಗಳ ಕೂಗು "ಅರಣ್ಯರೋದನವೇ' ಆಗಿ ಪರಿಣಮಿಸಿತ್ತೆಂದರೆ ತಪ್ಪಲ್ಲ.

**ಬ್ರಿಟಿಶರ ವಾದ**

ಬ್ರಿಟಿಶ್ ಆಡಳಿತೆ ಜನಪ್ರಿಯವಾಗಿದೆಯೆಂದು ಅಮೇರಿಕದಲ್ಲಿ ಅವರು ಡಂಗುರ ಸಾರಿದ್ದರು. ಯುದ್ಧದಲ್ಲಿ ಸಹಾಯ ನೀಡಲು ಇಪ್ಪತ್ತು ಲಕ್ಷ ಹಿಂದೀಯರು "ಸ್ವಯಂಪ್ರೇರಣೆ"ಯಿಂದ ಸೈನಿಕರಾಗಿ ಸೇರಿದ ಉದಾಹರಣೆಯನ್ನು ಅಮೇರಿಕನ್ನರ ಮುಂದಿಡುತ್ತಿದ್ದರು. ಭಾರತದ ಸ್ವಾತಂತ್ರ್ಯವನ್ನೇ ಬ್ರಿಟನ್ ಅಪೇಕ್ಷಿಸುತ್ತಿದೆಯೆಂದೂ ಅವರ ಮತ್ತೊಂದು ವಾದ. ಭಾರತವು ಆ ಸ್ಥಿತಿಗೆ ಮುಟ್ಟಿದಾಗ ಹೊರಟು ಹೋಗಲು ಸದಾ ಸಿದ್ಧ ; ಆದರೆ ಈಗಂದೀಗ ಹೊರಟರೆ ಪರರಾಷ್ಟ್ರಗಳಿಂದ ಭಾರತದ ಸ್ವಾತಂತ್ರ್ಯಕ್ಕೆ ಗಂಡಾಂತರವಿದೆಯೆಂದು ಅವರು ಸೂಚಿಸುತಿದ್ದರು. ಒಮ್ಮಿಂ

ದೊಮ್ಮೆಯೇ ಸ್ವಾತಂತ್ರ್ಯ ಕೊಡಲು ಹಿಂದೂ-ಮುಸ್ಲಿಂ ಜಗಳ, ಅಲ್ಪ ಸಂಖ್ಯಾಕರ ಹಕ್ಕುಹಿತಗಳ ರಕ್ಷಣೆ, ಆಶ್ರಿತರಾಜರೊಡನೆ ಮಾಡಿಕೊಂಡ ಒಪ್ಪಂದಗಳು ಮೊದಲಾದ ಅಡೆತಡೆಗಳಿವೆಯೆಂದು ಕಾರಣಗಳನ್ನು ಕೊಡುತಿದ್ದರು.

**ಅಮೇರಿಕೆಗೆ ವಿಜಯಲಕ್ಷ್ಮಿ**

ಬ್ರಿಟಿಶರ ಪ್ರಚಾರವು ಈ ರೀತಿ ಅವ್ಯಾಹತವಾಗಿ ಸಾಗಿರುವಾಗಲೇ ವಿಜಯಲಕ್ಷ್ಮಿ ಅಮೇರಿಕೆಗೆ ಬಂದುದು ಅವಳು ಕಾಲಿಟ್ಟುದುದು ನವಂಬರ್ ೧೯೪೪ರಲ್ಲಿ ಕಾಲೇಜಿನಲ್ಲಿ ಕಲಿಯುತ್ತಿದ್ದ ಮಕ್ಕಳನ್ನು ಕಾಣುವ ಆತುರದಿಂದ ಬಂದವಳು. ಬಂದ ಮೇಲೆ, ಬ್ರಿಟಿಶರು ನಡೆಸಿದ್ದ ಅಪ ಪ್ರಚಾರದಿಂದ ನೊಂದಳು. ಕಾಂಗ್ರೆಸ್ ಮುಖಂಡರ ಮೇಲೆ ನಾನಾ ಆರೋಪಗಳನ್ನು ಹೇರಲಾಗಿತ್ತು. ಸಾಮ್ರಾಜ್ಯವಾದೀ ಜಪಾನಿನೊಡನೆ ಗಾಂಧೀಜಿಯವರ ಸಂಬಂಧವಿದೆಯೆಂದೂ ಕಲಂಕ ಹಚ್ಚಲು ಬ್ರಿಟಿಶ್ ಪ್ರಚಾರಕರು ಹೇಸಿರಲಿಲ್ಲ. ಗಾಂಧೀಜಿ ಹಾಗೂ ಕಾಂಗ್ರೆಸ್ ಮುಖಂಡರು ಸೆರೆಮನೆಯಲ್ಲಿದುದರಿಂದ ಅವರ ವಾಣಿ ಅಮೇರಿಕದ ಜನರಿಗೆ ಕೇಳಿಸುವಂತಿರಲಿಲ್ಲ. ಆದುದರಿಂದ ವಿಜಯಲಕ್ಷ್ಮಿಯೇ ಕಾಂಗ್ರೆಸ್ಸಿನ ಘನವಾದ ಗೊತ್ತುಗುರಿಗಳನ್ನು ಜನರ ಲಕ್ಷಕ್ಕೆ ತಂದುಕೊಟ್ಟಳು ಗಾಂಧೀಜಿ ಪ್ರಜಾಸತ್ತೆ. ಪ್ರಜಾಸ್ವಾತಂತ್ರ್ಯ, ವಿಶ್ವಬಾಂಧವ್ಯ. ವಿಶ್ವಶಾಂತಿಗಳಿಗಾಗಿ ಹೋರಾಡುತ್ತಿರುವ ಮಹಾಪುರುಷರೆಂದು ಸಾರಿದಳು. "ಸರಿಮಾನತೆ, ಸೌಹಾರ್ದ, ಸ್ವಾತಂತ್ರ್ಯ" ತತ್ವಗಳು ಹಿಂದೀಯರಿಗೂ ಪ್ರಿಯವಾಗಿವೆಯೆಂದು ಗುಡುಗಿದಳು. ಲೇಖನ, ಭಾಷಣಗಳಿಂದ ಅಮೇರಿಕದಲ್ಲಿ ಹೊಸ ವಾತಾವರಣವನ್ನು ನಿರ್ಮಿಸಿದಳೆಂದರೂ ಸರಿಯೇ. ಇದರಿಂದ ಬ್ರಿಟಿಶ್ ಸಾಮ್ರಾಜ್ಯವಾದಿಗಳೂ ತಲ್ಲಣಗೊಂಡರು. ಬ್ರಿಟಿಶ್ ಪಾರ್ಲಿಮೆಂಟಿನಲ್ಲೂ ಅನೇಕರು "ಭಾರತ ಮಂತ್ರಿ" ಅಮೇರಿಗೆ ಪ್ರಶ್ನೆಗಳ ಸುರಿಮಳೆಗರೆದರು.

**ಅಂತರ್ರಾಷ್ಟ್ರೀಯ ಪ್ರಶ್ನೆ**

ವಿಜಯಲಕ್ಷ್ಮಿಯ ಚಟುವಟಿಕೆಗಳಿಂದ ಅಮೇರಿಕನ್ನರ ದೃಷ್ಟಿ ಬಹಳ ಮಟ್ಟಿಗೆ ಭಾರತದ ಪ್ರಶ್ನೆಯ ಕಡೆ ಹರಿಯಿತು. ಕಾಂಗ್ರೆಸ್ ಫ್ಯಾಸಿಸ್ಟ್ ಸಂಸ್ಥೆಯೆಂದು ೧೯೪೨ರಲ್ಲಿ ನಂಬಿದ್ದ ಅಮೇರಿಕನ್ನರು ೧೯೪೫ರಲ್ಲಿ ನಂಬ

ಲಾರದಾದರು. ಭಾರತದ ಸ್ವಾತಂತ್ರ್ಯದ ಬಗ್ಗೆ ಅನೇಕ ಅಮೇರಿಕನ್ ಪತ್ರಿಕೆಗಳು ಹಿರಿಬರಹಗಳನ್ನು ಬರೆಯಲಾರಂಭಿಸಿದುವು. ಹೆಸರಾದ ಪತ್ರಿಕೋದ್ಯಮಿಗಳು ಅವಳನ್ನು ಭೆಟ್ಟಿಯಾಗಿ ಭಾರತದ ನಿಜ ಪರಿಸ್ಥಿತಿಯನ್ನು ತಿಳಿಯಲೆತ್ನಿಸಿದರು. ದೊಡ್ಡ ದೊಡ್ಡ ಮುತ್ಸದ್ದಿಗಳನ್ನು ವಿಜಯಲಕ್ಷ್ಮಿ ಭೆಟ್ಟಿಯಾಗಿ ಚರ್ಚಿಸಿದಳು. ಭಾರತದ ಪ್ರಶ್ನೆ ಕೇವಲ ಬ್ರಿಟನಿನ ಆಂತರಿಕ ಪ್ರಶ್ನೆಯಲ್ಲ; ಅದು ಅಂತರರಾಷ್ಟ್ರೀಯ ಪ್ರಶ್ನೆಯೆಂದು ವಾದಿಸಿದಳು. "ಸ್ವಾತಂತ್ರ್ಯದಿಂದಲೇ ಜಗತ್ತಿನ ರಾಷ್ಟ್ರಗಳೊಳಗೆ ಪರಸ್ಪರ ಪ್ರೀತ್ಯಾದರ ಸ್ನೇಹ ಸೌಹಾರ್ದವುಂಟಾಗುವುದು ನಿಶ್ಚಯ ಜಾಗತಿಕ ಸ್ವಾತಂತ್ರ್ಯದಿಂದಲೇ ಜಾಗತಿಕ ಶಾಂತಿ. ಇಲ್ಲದಿದ್ದರೆ ಸಾಮ್ರಾಜ್ಯವಾದದಿಂದ ಇನ್ನಾದರೂ ಲೋಕಕ್ಕೆ ಗಂಡಾಂತರ ತಪ್ಪದು" ಎಂದು ಗರ್ಜಿಸಿದಳು. ಅವಳ ವ್ಯಕ್ತಿತ್ವ, ವಾಕ್ಪಟುತ್ವ, ವಿಚಾರಸರಣಿ, ಸ್ವಾತಂತ್ರ್ಯಪ್ರಿಯ ಅಮೇರಿಕನ್ನರ ಮನಸ ಮೋಹಿಸಿದುವು.

**ರಾಷ್ಟ್ರಸಂಘ**

ಸ್ವಾತಂತ್ರ್ಯಪ್ರಿಯ ಜನರು ವಿಶ್ವಶಾಂತಿ ಮತ್ತು ಸ್ವಾತಂತ್ರ್ಯಗಳ ಬಗ್ಗೆ ಯಾವಾಗಲೂ ಚಿಂತಾತುರರಾಗಿದ್ದರು. ವಸಾಹತುಗಳು, ಸಾಮ್ರಾಜ್ಯವಾದಗಳೆಲ್ಲ ಸ್ವಾತಂತ್ರ್ಯ ಮತ್ತು ಶಾಂತಿಗಳಿಗೆ ದೊಡ್ಡ ಕಂಟಕಗಳೇ. ಆ ಕಾರಣಗಳಿಂದಲೇ ೨೫ ವರುಷಗಳೊಳಗೆ ಎರಡು ಮಹಾಯುದ್ಧಗಳು ಸಂಭವಿಸಿದುವು. ಯುದ್ಧವನ್ನು ತಡೆದು ಅಥವಾ ತಪ್ಪಿಸಿ ಜಾಗತಿಕ ಶಾಂತಿ ಪರಿಪಾಲನೆ ಮಾಡಲು ಕಟ್ಟಿದ ಜನಾಂಗ ಸಂಘ "ಸಂಪೂರ್ಣ ಜರಿದು ಬಿದ್ದಿತ್ತು. ಆದರೆ, ಅಂತಹುದೇ ಇನ್ನೊಂದು ಪ್ರಬಲ ಅಂತರ್‍ರಾಷ್ಟ್ರೀಯ ಸಂಸ್ಥೆಯನ್ನು ರಚಿಸುವುದು ಅವಶ್ಯ. ಯುದ್ಧದಲ್ಲಿ ತಮಗೆ ವಿಜಯ ನಿಶ್ಚಿತವೆಂದು ಹೊಳೆಯಲಾರಂಭಿಸಿದಂದಿನಿಂದಲೂ ಜಗತ್ತಿನ ಹಿರಿರಾಷ್ಟ್ರಗಳು ಅಂತಹ ಒಂದು ಸಂಸ್ಥೆಯನ್ನು ಸ್ಥಾಪಿಸಲು ಸಿದ್ಧತೆ ನಡೆಸುತಿದ್ದುವು ಯುದ್ಧಾಂತ್ಯವಾದಮೇಲೆ ಅದೇ ಘನ ಉದ್ದೇಶ ಸಾಧನೆಗಾಗಿ ಹೊಸ "ರಾಷ್ಟ್ರ ಸಂಘ" ತಲೆ ಎತ್ತಿತು ಜಗತ್ತಿನ ಎಲ್ಲ "ಸ್ವತಂತ್ರ" ರಾಷ್ಟ್ರಗಳಿಗೂ ಅದರಲ್ಲಿ ಪ್ರವೇಶ ಕೂಡಲು ಒಪ್ಪಿಕೊಂಡರು. ಈ ರಾಷ್ಟ್ರಗಳ ಪ್ರತಿನಿಧಿಗಳನ್ನೊಳಗೊಂಡ "ಪ್ರತಿನಿಧಿ ಸಭೆ" (ಜನರಲ್ ಅಸ್ಲೆಂಬಿ) ಯನ್ನು ರಚಿಸಿದರು. ಅದರ ಅಂಗವಾಗಿ ವಿಶೇಷಾಧಿಕಾರವುಳ್ಳ "ಭದ್ರತಾ ಮಂಡಲ" (ಸೆಕ್ಯೂರಿಟಿ ಕೌನ್ಸಿಲ್) ಕೂಡಾ

ಸ್ಥಾಪಿಸಲ್ಪಟ್ಟಿತು. ಜಾಗತಿಕ ಶಾಂತಿ ಸ್ಥಾಪಿಸಲು ಹಿರಿ ರಾಷ್ಟ್ರಗಳ ಆತುರ ಜಾಗತಿಕ ಸನದನ್ನು ಘೋಷಿಸಲೂ ಅವರ ಆಶೆ. ಈ ಉದ್ದೇಶ ಸಾಧನೆಗಾಗಿ ೧೯೪೫ರಲ್ಲಿ ಅಮೇರಿಕದ ಸಾನ್‌ಫ್ರಾನ್ಸಿಸ್‌ಕೋ ನಗರದಲ್ಲಿ ಶಾಂತಿಪರಿಷತ್ತನ್ನು ಕೂಡಿಸಲು ನಿರ್ಧರಿಸಿದರು

## ಭಾರತದ "ಪ್ರತಿನಿಧಿಗಳು"

ಸಾನ್ ಫ್ರಾನ್ಸಿಸ್‌ಕೋ ಪರಿಷತ್ತಿನಲ್ಲಿ ಭಾರತದ "ಪ್ರತಿನಿಧಿ"ಗಳಾಗಿ ಭಾಗವಹಿಸಲು ವಾಯಿಸರಾಯರು ಸರ್ ಫಿರೋಜ್ ಖಾನ್ ನೂನ್, ಸರ್ ರಾಮಸ್ವಾಮಿ ಮುದಲಿಯಾರ್ ಮತ್ತು ಸರ್ ಕೃಷ್ಣಮಾಚಾರಿಯವರನ್ನು ನೇಮಿಸಿದರು. ಇವರೆಲ್ಲ ಬ್ರಿಟಿಶರ ತಾಳಕ್ಕೆ ಸರಿಯಾಗಿ ಕುಣಿವ ಗೊಂಬೆಗಳು ಭಾರತವು ಸ್ವತಂತ್ರ ರಾಷ್ಟ್ರವೂ ಅಲ್ಲ. ಹೀಗಿರುವಾಗ ಅವರನ್ನು ಭಾರತದ "ಪ್ರತಿನಿಧಿ" ಗಳೆಂದು ಕರೆಯುವುದುದರಲ್ಲಿ ಏನೂ ಹುರುಳಿರಲಿಲ್ಲ. ಆದರೆ ಅದನ್ನು ಮರೆಮಾಚಲು ಬ್ರಿಟಿಶರ ಸಾಹಸ ಬ್ರಿಟಿಶರು ಕಳಿಸಿದ್ದ ಈ ಮಹನೀಯರೂ ಅವರ ರಾಗಕ್ಕೆ ಸರಿಯಾಗಿ ತಮ್ಮ ಆಲಾಪನೆಗಳನ್ನು ಎಳೆದರು. "ಭಾರತಕ್ಕೆ ಬ್ರಿಟಿಶರು ಸಾಮಂತಸ್ವರಾಜ್ಯದ ಸ್ಥಾನಮಾನವನ್ನು ಕೊಟ್ಟು ಬಿಟ್ಟಿದ್ದಾರೆ' ಎಂದು ನೂನರು ವೀಣೆ ಬಾರಿಸಿದರು "ವಾಯಿಸರಾಯರ ಮಂತ್ರಿಮಂಡಳದ ಆಡಳಿತೆಯಲ್ಲಿ ವಾಯಿಸರಾಯರು ಕೈ ಹಾಕುವುದಿಲ್ಲ" ಎಂದು ಪುನಃ ಅವರು ನುಡಿದಾಗ ಬಲ್ಲವರು ನಕ್ಕರು. "ನಾವು ಬ್ರಿಟಿಶ್ ಸರಕಾರಕ್ಕೆ ಹೊಣೆಗಾರರಲ್ಲ ಭಾರತ ಸರಕಾರಕ್ಕೆ ಹೊಣೆಗಾರರು" ಎಂದು ಮುದಲಿಯಾರರು ಸಾರಿದಾಗ ಬ್ರಿಟಿಶರಿಗೆ ಪರಮಾನಂದವಾಯಿತು. ಭಾರತದ ಸ್ವಾತಂತ್ರ್ಯ ಪ್ರಶ್ನೆಯನ್ನು ಮುಂಡಿಸುವ ವಿಚಾರ ಅವರಲ್ಲಿರಲಿಲ್ಲ. ಬ್ರಿಟನಿನ ಪರವಾಗಿ ಒಂದು ಮತಕೊಡಲು ಅವರನ್ನು ಕಳಿಸಲಾಗಿತ್ತು.

## ವಿಜಯಲಕ್ಷ್ಮಿಯ ವಿರೋಧ

ಈ ಪ್ರತಿನಿಧಿಗಳು ಭಾರತದ ನಿಜವಾದ ಪ್ರತಿನಿಧಿಗಳಲ್ಲ; ಯಾವುದೇ ರಾಜಕೀಯ ಪಕ್ಷಗಳ ಪ್ರತಿನಿಧಿಗಳಾಗಿಯೂ ಆರಿಸಲ್ಪಟ್ಟಿರಲಿಲ್ಲ. ಇದು ಹಿಂದೀಯರು ಅರಿತ ವಿಷಯವೇ ಆದರೆ ರಾಷ್ಟ್ರೀಯ ಧುರೀಣರು ಸೆರೆಮನೆಗಳಲ್ಲಿದ್ದುದರಿಂದ ಭಾರತದ ವಿರೋಧ ಸಾನ್‌ಫ್ರಾನ್ಸಿಸ್‌ಕೋ ಪರಿಷತ್ತಿಗೆ ಗೊತ್ತಾಗುವಂತಿರಲಿಲ್ಲ. ಇಂಥ ದುರವಸ್ಥೆಯನ್ನು ಕಂಡ ವಿಜಯಲಕ್ಷ್ಮಿ

ಭಾರತ ಜನಾಂಗದ ಪರವಾಗಿ ವಿರೋಧ ವ್ಯಕ್ತಪಡಿಸಲು ನಿರ್ಧರಿಸಿದಳು. ಅಮೇರಿಕದಲ್ಲಿದ್ದ ಅನೇಕ ಹಿಂದೀ ನಿರ್ವಾಸಿತರು, ವಿದ್ಯಾರ್ಥಿಗಳು, ಅವಳಿಗೆ ಬೆಂಬಲವಾಗಿ ನಿಂತರು. ಅಮೇರಿಕದಲ್ಲಿ ಸ್ಥಾಪಿಸಲ್ಪಟ್ಟಿದ್ದ "ಹಿಂದೀ ಸಂಘ" (ಇಂಡಿಯಾ ಲೀಗ್) ಮತ್ತು "ಹಿಂದೀ ಸ್ವಾತಂತ್ರ್ಯ ಸಮಿತಿ"ಗಳೂ ವಿಜಯ ಲಕ್ಷ್ಮಿಯ ಸಹಾಯಕ್ಕೆ ಬಂದುವು. ಈ ಸಂಘಗಳ ಪರವಾಗಿ ಮಾತನಾಡಲು ಅವಳನ್ನೇ ಆರಿಸಲಾಯ್ತು. ಆದುದರಿಂದ ಸಾನ್‌ಫ್ರಾನ್ಸಿಸ್‌ಕೊ ಪರಿಷತ್ತಿನ ಕಾಲಕ್ಕೆ ಅವಳು ಆ ನಗರಕ್ಕೆ ಧಾವಿಸಿದಳು. ಅಲ್ಲಿ ಮುಟ್ಟಿದೊಡನೆಯೇ, ಈ ಬ್ರಿಟಿಶ್ ಕೈಗೊಂಬೆಗಳು ಭಾರತದ ನಿಜವಾದ ಪ್ರತಿನಿಧಿಗಳಲ್ಲ ವೆಂದು ಘೋಷಿಸಿದಳು. "ಭಾರತದ ರಾಷ್ಟ್ರೀಯ ಮುಖಂಡರು ಸೆರೆಮನೆಗ ಳಲ್ಲಿದ್ದಾರೆ. ಅವರ ವಾಣಿ ಕೇಳಿಸದಂತೆ ಬ್ರಿಟನ್ ಯತ್ನಿಸಿದೆ. ಹೀಗಿರು ವಾಗ ಈ ಕೈಗೊಂಬೆಗಳಿಗೆ ಭಾರತದ ಪರವಾಗಿ ಮಾತನಾಡುವ ಅಧಿಕಾರ ವಿಲ್ಲ ಅವರು ಕೈಕೊಂಡ ನಿರ್ಣಯವನ್ನು ಭಾರತದ ಜನತೆ ಒಪ್ಪದು" ಎಂದು ಗುಡುಗಿದಳು ವಿಜಯಲಕ್ಷ್ಮಿಯ ಈ ಘೋಷಣೆಯಿಂದ ಬ್ರಿಟಿಶ್ ಅಧಿಕಾರಿ ಗಳ ಕೈಕಾಲು ನಡುಗಿತು. ಅವರು ಕೊಟ್ಟ ಬಿರುದು ಬಾವಲಿಗಳನ್ನು ಧರಿಸಿ ಬಿಂಕದ ಕೋಳಿಗಳಂತೆ ಕೆಲೆಯುತಿದ್ದ ಭಾರತದ "ಪ್ರತಿಧಿಗಳ" ಗಂಟಲು ಕಟ್ಟಿತು! ಭಾರತದ ಸ್ವಾತಂತ್ರ್ಯದ ಬಗ್ಗೆ ಸಹಾನುಭೂತಿಯಿದ್ದ ರಾಷ್ಟ್ರಗಳಿಂದ ಬಂದ ಪ್ರತಿನಿಧಿಗಳು ಸಂತೋಷಪಟ್ಟರು.

### ಸ್ವಾತಂತ್ರ್ಯ ಘೋಷಣೆಯ ಬೇಡಿಕೆ

ಸಾನ್‌ಫ್ರಾನ್ಸಿಸ್‌ಕೋ ಪರಿಷತ್ತು ಆರಂಭವಾದ ಕೂಡಲೇ ವಿಜಯ ಲಕ್ಷ್ಮಿ, ರಾಷ್ಟ್ರಸಂಘದ ಮುಖ್ಯ ಕಾರ್ಯದರ್ಶಿಗಳನ್ನು ಕಂಡು ಭಾರತದ ಪರ ವಾಗಿ ಭಾರತದ ಬೇಡಿಕೆಗಳನ್ನೊಳಗೊಂಡ ವಿಸ್ತೃತ "ಮೆಮೋರಂಡಂ" (ನಿವೇದನ ಪತ್ರಿಕೆ)ನ್ನು ಒಪ್ಪಿಸಿದಳು ಭಾರತದ ಸ್ವಾತಂತ್ರ್ಯವನ್ನು ಘೋಷಿಸಬೇಕೆಂಬುದೇ ಅದರ ತಿರುಳು. "ಭಾರತವು ಇನ್ನೂ ಪರಾಧೀನ ದೇಶ ಬ್ರಿಟಿಶ್ ಸರಕಾರದ ಆಮಂತ್ರಣದ ಮೇರೆಗೆ ಅದಕ್ಕೆ ಇಲ್ಲಿ ಪ್ರಾತಿನಿಧ್ಯ ಕೊಡಲಾಗಿದೆ ದೇಶದಲ್ಲಿ ರಾಷ್ಟ್ರೀಯ ಸರಕಾರವಿಲ್ಲ. ವಿದೇಶಗಳಲ್ಲಿ ಅದರ ರಾಯಭಾರಿಗಳಿಲ್ಲ ಇದು ನಿಜವಾಗಿಯೂ ಭಾರತಕ್ಕೆ ಮಾಡಿದ ಮಹಾ ಅನ್ಯಾಯವಾಗಿದೆ ಮಾತ್ರವಲ್ಲ, ರಾಷ್ಟ್ರಸಂಘದಲ್ಲಿ ಸ್ವತಂತ್ರ ರಾಷ್ಟ್ರಗಳಿಗೆ

ಮಾತ್ರ ಸ್ಥಾನವೆಂಬ ಮಾತಿಗೆ ತೀರ ವಿರೋಧವಾಗಿದೆ. ಭಾರತದ ಜನತೆಯ ಪ್ರಾತಿನಿಧಿಕ ಸಂಸ್ಥೆಯಾಗಿರುವ ರಾಷ್ಟ್ರೀಯ ಕಾಂಗ್ರೆಸ್ಸು, ಆದಿಯಿಂದಲೂ ನಾಝಿಸಂ, ಫ್ಯಾಸಿಝಂ ಮತ್ತು ಇಂಪೀರಿಯಲಿಸಂಗಳನ್ನು ತಿರಸ್ಕರಿಸಿದೆ. ಈಗ ಫ್ಯಾಸಿಝಂ ಮತ್ತು ನಾಝಿಸಂಗಳಿಗೆ ಸೋಲೋದಗಿರುವುದೇನೋ ನಿಜ. ಆದರೆ, ಇಂಪೀರಿಯಲಿಸಂ ಇನ್ನೂ ಭದ್ರವಾಗಿದೆ. ಸಾಮ್ರಾಜ್ಯವಾದ ತತ್ವಕ್ಕೆ ತಿಲಾಂಜಲಿ ಎರೆಯಬೇಕು ಮಾತ್ರವಲ್ಲ, ಭಾರತದ ಸ್ವಾತಂತ್ರ್ಯ ಘೋಷಿಸಿ ಆ ನುಡಿಯನ್ನು ನಡೆಯಲ್ಲಿ ತರಬೇಕು." ಎಂಬುದೇ ಆ ಬೇಡಿಕೆಯ ಮುಖ್ಯಾಂಶಗಳು.

### ಅವಿಶ್ರಾಂತ ಪರಿಶ್ರಮ

ಈ ಪರಿಷತ್ತು ನಡೆದಷ್ಟು ಕಾಲ ವಿಜಯಲಕ್ಷ್ಮಿಗೆ ಬಿಡುವಿರಲಿಲ್ಲ ವಾರಕ್ಕೇಳು ದಿನವೂ ಅವಿಶ್ರಾಂತವಾಗಿ ದುಡಿದಳು. ಪರಿಷತ್ತಿಗೆ ಬಂದ ಸಾವಿರಾರು ಪತ್ರಿಕೋದ್ಯಮಿಗಳು ಅವಳನ್ನು ಕಾಣಲು ಆತುರರಾಗಿದ್ದರು ಹೆಚ್ಚು ಕಡಿಮೆ ಎರಡು ಸಾವಿರಕ್ಕಿಂತ ಹೆಚ್ಚು ಪತ್ರಿಕೋದ್ಯಮಿಗಳಿಗೆ ಭೆಟ್ಟಿ ಕೊಟ್ಟು ಭಾರತದ ನಿಜಸ್ಥಿತಿಯನ್ನು ಅವರಿಗೆ ಅರುಹಿದಳು. ಸಂದರ್ಭ ದೊರೆತಾಗಲೆಲ್ಲ ರೇಡಿಯೋ ಕೇಂದ್ರಗಳಿಂದ ಭಾಷಣ ಮಾಡಿದಳು. ಚಹಾ ಸತ್ಕಾರ, ಔತಣ ಸಮಾರಂಭಗಳಿಲ್ಲದ ದಿನಗಳೇ ಇರಲಿಲ್ಲ. ಆ ಸಂದರ್ಭಗಳಲ್ಲೂ ನಾಲ್ಕು ಮಾತುಗಳನ್ನು ಅತಿಥಿಗಳಿಂದ ಜನ ಅಪೇಕ್ಷಿಸುವುದು ಅಮೇರಿಕದ ರೂಢಿ ಪ್ರಸಿದ್ಧ ಪತ್ರಿಕೋದ್ಯಮಿಗಳನ್ನೂ, ರಾಜಕಾರಣಿಗಳನ್ನೂ ತಾನಾಗಿ ಚಹಾಸತ್ಕಾರಕ್ಕೆ ಕರೆಯಲೂ ವಿಜಯಲಕ್ಷ್ಮಿ ಹಿಂಜರಿಯುತ್ತಿದ್ದಿಲ್ಲ. ಪರಿಷತ್ತಿಗೆ ಬಂದಿದ್ದ ಇಜಿಪ್ತ್, ಇರಾಕ್ ಮತ್ತು ಸೌದಿ ಅರೇಬಿಯಾಗಳ ವಿದೇಶ ಮಂತ್ರಿಗಳ ಸನ್ಮಾನಕ್ಕಾಗಿ ತಾನೇ ಸತ್ಕಾರಕೂಟವನ್ನೇರ್ಪಡಿಸಿದಳು. ಅಧ್ಯಕ್ಷ ಟ್ರೂಮನ್ ಮತ್ತು ಸತಿ ಟ್ರೂಮನ್ನರನ್ನು ಭೆಟ್ಟಿಯಾಗಲೂ ಅವಳು ಮರೆಯಲಿಲ್ಲ. ಚೀನದ ಸೂಂಗ್ ಆಸ್ಟ್ರೇಲಿಯದ ಈವಾಟ್, ಫಿಲಿಪ್ಪಾಯಿನ್ಸಿನ ರೋಮುಲೋ, ಬ್ರಿಟನಿನ ಆ್ಯಟ್ಲಿ, ಅಮೇರಿಕದ ಸ್ಟೆಟಿನಸ್ ಮೊದಲಾದ ಮಂತ್ರಿಗಳನ್ನು ಕಂಡಳು. ಆದರೆ, ಈ ಪ್ರಶ್ನೆಯನ್ನು ಸಾನ್‌ಫ್ರಾನ್ಸಿಸ್ಕೋ ಪರಿಷತ್ತಿನಲ್ಲಿ ಚರ್ಚಿಸಲು ಅವರು ಇಚ್ಛಿಸಲಿಲ್ಲ. ಜಾಗತಿಕ ಶಾಂತಿ ಘೋಷಣೆ ಮಾಡುವ "ಕಾರ್ಯಭಾರ" ಮಾತ್ರ ಪರಿಷತ್ತಿನದ್ದಾಗಿದ್ದಿತಂತೆ !

**ನಾಣ್ಯದ ಇನ್ನೊಂದು ಮುಖ**

ಭಾರತದ ವಿಮೋಚನೆಗಾಗಿ ಅಮೇರಿಕದ ಧನ ಜನ ಸಹಾಯ ಸಂಪತ್ತುಗಳ ಸಹಾಯವನ್ನು ಪಡೆವ ಉದ್ದೇಶ ವಿಜಯಲಕ್ಷ್ಮಿಯದಲ್ಲ. ಸ್ವಾತಂತ್ರ್ಯಕ್ಕಾಗಿ ಆ ಆ ದೇಶದ ಜನರೇ ಹೋರಾಡಿ ಅದನ್ನು ಗಳಿಸಬೇಕು. ಭಾರತದ ನಿಜವಾದ ಸ್ಥಿತಿಯ ಮೇಲೆ ಬೆಳಕು ಚೆಲ್ಲುವುದೇ ಅವಳ ಯತ್ನ. ನಾಣ್ಯದ ಒಂದು ಬದಿಯನ್ನು ಬ್ರಿಟಿಶ್ ಅಧಿಕಾರಿಗಳು ಅಮೇರಿಕನ್ ಜನಾಂಗಕ್ಕೆ ತೋರಿಸಿದ್ದರು. ಸೊಗಸಾದ, ಮುದ್ದಾದ, ರಾಜ ಠೀವಿಯಿಂದ ಶೋಭಿಸುವ ಇನ್ನೊಂದು ಮುಖವನ್ನು ಬಚ್ಚಿಟ್ಟಿದ್ದರು. ಅದನ್ನು ಪ್ರದರ್ಶಿಸಲು ಅವಳ ಆಶೆ. ಆ ಯತ್ನವು ಸ್ವಲ್ಪ ಮಟ್ಟಿಗೆ ಹೂ ಬಿಟ್ಟಿತು. ಅಮೇರಿಕನ್ನರಲ್ಲಿ ಹೊಸ ಜಾಗೃತಿಯುಂಟಾಯಿತು. ವಿಜಯಲಕ್ಷ್ಮಿಯನ್ನು ಗೌರವದಿಂದ ಕಾಣಲು ತೊಡಗಿದರು ಭಾರತದ ನಿಜವಾದ ಪ್ರತಿನಿಧಿಯೆಂದು ಅವಳ ಸನ್ಮಾನ ಮಾಡಿದರು.

**ಕ್ಯಾಲಿಫೋರ್ನಿಯಾದ ಗೌರವ**

ಕ್ಯಾಲಿಫೋರ್ನಿಯಾ ಪ್ರಾಂತಿಕ ಶಾಸನ ಸಭೆಯಲ್ಲಿ ಭಾಷಣ ಮಾಡಬೇಕೆಂದು ಅವಳಿಗೆ ಆಮಂತ್ರಣ ಬಂದಿತು ಕೆಲವರು ಆ ಸೂಚನೆಯನ್ನು ಶಾಸನ ಸಭೆಯಲ್ಲಿ ವಿರೋಧಿಸಿದ್ದರಂತೆ. ಆದರೆ ಅರ್ನೆಸ್ಟ್ ದೇವ್ ಆ ಯತ್ನವನ್ನು ಸೋಲಿಸಿದರು. ''೧೫೦ ವರುಷಗಳ ಹಿಂದೆ ನಮ್ಮ ಹಿರಿಯರು ಈ ಸ್ವಾತಂತ್ರ್ಯದ ಘನ ಉದ್ದೇಶಕ್ಕಾಗಿಯೇ ಹೋರಾಡಿದರು. ಅದನ್ನು ನಾವು ಈ ಪೀಳಿಗೆಯವರು ಮರೆಯಲು ಅಶಕ್ಯ ಭಾರತಕ್ಕೆ ಮಾತ್ರವಲ್ಲ, ಜಗತ್ತಿನ ಎಲ್ಲ ಜನರಿಗೂ ಸ್ವಾತಂತ್ರ್ಯ ಅವಶ್ಯ"ಎಂದು ಅವರು ಗರ್ಜಿಸಿದರು. ಅದರಿಂದ ವಿರೋಧಿ ಸದಸ್ಯರು ತೆಪ್ಪಗಾದರು ಮತ್ತು ಆಮಂತ್ರಣ ಕೊಡಲು ಒಪ್ಪಿದರು. ವಿಜಯಲಕ್ಷ್ಮಿ ಭಾಷಣ ಮಾಡಲು ತೆರಳಿದಾಗ ಶಾಸನಸಭೆಯು ಪ್ರತಿನಿಧಿಗಳಿಂದ ತುಂಬಿದ್ದಿತು. ಅನೇಕ ಅತಿಥಿಗಳೂ ಬಂದಿದ್ದರು. ಹೊರಗೆ ಸಾವಿರಾರು ಸ್ತ್ರೀಪುರುಷರು ಅವಳ ದಿವ್ಯವಾಣಿಯನ್ನು ಕೇಳಲು ಆತುರರಾಗಿ ನಿಂತಿದ್ದರು.

**ಅವಳ ದಿವ್ಯವಾಣಿ**

"ಸಾಮ್ರಾಜ್ಯಗಳಿರುವವರೆಗೆ ಜಾಗತಿಕ ಶಾಂತಿ ಬರಿಗನಸೇ ಸರಿ. ಭದ್ರತೆಯೂ ಇರಲಾರದು. ಜಾಗತಿಕ ಸ್ವಾತಂತ್ರ್ಯದಿಂದಲೇ ಜಾಗತಿಕ

ಶಾಂತಿ ಮತ್ತು ಭದ್ರತೆ ಶಕ್ಯ" ಎಂದು ಅವಳು ಮಾತು ಆರಂಭಿಸಿದಳು. "ಎಲ್ಲ ಜನಾಂಗಗಳ ಸ್ನೇಹ ಸಂಪಾದಿಸದೆ ಜಾಗತಿಕ ಶಾಂತಿ ಸ್ಥಾಪಿಸುವುದು ಕಠಿನ ಆ ಸ್ನೇಹ ಸಂವರ್ಧನೆಗಾಗಿ ಎಲ್ಲರೂ ಪ್ರಯತ್ನಿಸಬೇಕು. ಸ್ನೇಹವೇ ವಿವಿಧ ರಾಷ್ಟ್ರಗಳ ಅವಲಂಬನದ ಮಾರ್ಗ. ಆರೀತಿಯ ಅವಲಂಬನದಿಂದ ವಿಶ್ವಬಾಂಧವ್ಯ. ಆದರೆ, ಸ್ವಾತಂತ್ರ್ಯವಿಲ್ಲದ್ದರೆ ಸ್ನೇಹಾವಲಂಬನಗಳು ಹೇಗೆ ಸಾಧ್ಯ? ಪರಾಧೀನರಿಂದ ಸ್ನೇಹ ವಿಶ್ವಾಸ ಆಶಿಸುವುದು ಅಸಾಧ್ಯ. ಆ ಪರಿಸ್ಥಿತಿಯಲ್ಲಿ ತಿಕ್ಕಾಟ. ದ್ವೇಷಗಳಿಗೇ ಹೆಚ್ಚಿನ ಎಡೆಯಿದೆಯಲ್ಲ! ಭಾರತವು ಇಂದು ಸ್ವತಂತ್ರವಿರುತಿದ್ದರೆ ಜಾಗತಿಕ ಶಾಂತಿ ಮತ್ತು ಭದ್ರತೆಗಳಿಗಾಗಿ ಸಂಪೂರ್ಣವಾಗಿ ಸಹಕರಿಸುತಿತ್ತು. ಅದಕ್ಕಾಗಿ ಕಟ್ಟುವ ಜಾಗತಿಕ ಸಂಸ್ಥೆಯ ತಳಹದಿಯು ಭದ್ರವಾದೀತೇ? ಎಲ್ಲರಿಗೂ ನ್ಯಾಯ ಸ್ವಾತಂತ್ರ್ಯಗಳೇ ಜಾಗತಿಕ ಸಂಸ್ಥೆಯ ಭದ್ರ ಅಡಿಗಲ್ಲುಗಳಾಗಬೇಕು ಹಾಗಿದ್ದರೆ ಇಂದಲ್ಲದಿದ್ದರೆ ನಾಳೆ ಸರ್ವರಾಷ್ಟ್ರಗಳ ಸ್ನೇಹ ಸಹಕಾರ ಗಳಿಸಲು ಸುಲಭ ಸಾಧ್ಯ "ಸ್ವಾತಂತ್ರ್ಯ"ವೆಂದು ಒರಿ ಒಣ ಮಾತುಗಳನ್ನಾಡುವುದರಲ್ಲೂ ಅರ್ಥವಿಲ್ಲ ಅದನ್ನು ಕಾರ್ಯದಲ್ಲಿ ತರಬೇಕು. ಈ ಸ್ವಾತಂತ್ರ್ಯ ರಕ್ಷಣೆಗಾಗಿಯೇ ನೀವು ಹೋರಾಡಿದಿರಿ. ಅದು ನಿಮಗೆ ಪ್ರಿಯವಾಗಿದೆ. ಅದನ್ನು ಗಳಿಸದ ಜನರಿಗೆ ಅದು ಅಧಿಕ ಪ್ರಿಯವಾಗಿದೆ. ಆದಕ್ಕಾಗಿ ಅವರು ಹೋರಾಡುತಿದ್ದಾರೆ ಪರರ ಆಳಿಕೆ ಇರುವವರೆಗೆ ಆ ಹೋರಾಟ ನಿಲ್ಲದು. ಹೋರಾಟ ನಡೆಯುವ ವರೆಗೆ ಜಾಗತಿಕ ಶಾಂತಿಯಿಲ್ಲ."

## ನಿಗ್ರೋಗಳಿಗೆ ಸರಿಸಮಾನತೆ

ಕ್ಯಾಲಿಫೋರ್ನಿಯದಲ್ಲಿದ್ದಾಗಲೇ ಬಾಲ್ಟಿಮೋರ್ ನಗರದಿಂದ ಆಮಂತ್ರಣ ಬಂದಿತು. ನಗರದ ಮೇಯರರು ರೇಲ್ವೆ ಸ್ಟೇಶನಿಗೆ ಬಂದು ವಿಜಯಲಕ್ಷ್ಮಿಯನ್ನು ಸ್ವಾಗತಿಸುವುದು ಆ ನಗರ ಸಭೆಯು ಕೈ ಕೊಳ್ಳುತ್ತಿದ್ದ ಅತ್ಯಂತ ಗೌರವದ ಒಂದು ಪದ್ಧತಿ ವಿಜಯಲಕ್ಷ್ಮಿಯನ್ನು ಅದರಂತೆ ಸನ್ಮಾನಿಸಿವರು. ನಗರದ ಪಿತಾಮಹರಲ್ಲಿ ಭಾರತದ ಸ್ವಾತಂತ್ರ್ಯದ ಬಗ್ಗೆ ಬಹಳ ಸಹಾನುಭೂತಿಯಿದ್ದಿತೆಂದೂ ಪ್ರತ್ಯೇಕ ಹೇಳಬೇಕಾಗಿಲ್ಲ. ವಿಜಯಲಕ್ಷ್ಮಿ ಅಂದು ನಗರದ ಸಭೆಯಲ್ಲಿ ಮಾತನಾಡಿದಳು ಆ ನಗ

ರದಲ್ಲಿ ವಾಸಿಸುತ್ತಿದ್ದ ನಿಗ್ರೋ ಸ್ತ್ರೀ ಪುರುಷರೂ ಸಭೆಗೆ ಬಂದಿದ್ದರು. ಕೂಡಿದ ಜನ ಸಮುದಾಯದಲ್ಲಿ ನೂರಕ್ಕೆ ೩೦ ರಷ್ಟು ನಿಗ್ರೋಗಳಿದ್ದರು. ನಿಗ್ರೋ ಸಮಸ್ಯೆಯೂ ಅಮೇರಿಕದ ಮಹತ್ವದ ಪ್ರಶ್ನೆಗಳಲ್ಲೊಂದು. ಆದುದರಿಂದ ವಿಜಯಲಕ್ಷ್ಮಿ ಅದೇ ಸಮಸ್ಯೆಯ ಕಡೆ ಹೊರಳಿ, ಎಲ್ಲ ಜನರಿಗೂ ಸ್ವಾತಂತ್ರ್ಯ ಮತ್ತು ಸರಿಸಮಾನತೆ ಬೇಕೆಂದು ಪ್ರತಿಪಾದಿಸಿದಳು. ಅಮೇರಿಕದ ನಿಗ್ರೋಗಳ ಮೇಲೆ ಭಾರತದ ಸಹಾನುಭೂತಿಯಿದೆ ಮತ್ತು ಸರಿಸಮಾನಸ್ಥಾನ ಮಾನ ದೊರೆಯುವುದು ಅವಶ್ಯವೆಂದು ನುಡಿದಳು. ಆದರಿಂದ ಆ ನಗರದ ನಿಗ್ರೋಗಳ ಮೇಲಾದ ಪರಿಣಾಮವನ್ನು ವರ್ಣಿಸುವುದೇ ಕಷ್ಟ ಅನೇಕ ನಿಗ್ರೋ ಮುಖಂಡರು ಸಭೆಯಿಂದ ಎದ್ದುಬಂದು ವಿಜಯಲಕ್ಷ್ಮಿಗೆ 'ಹಸ್ತಲಾಘವನ್ನಿತ್ತು' ಆನಂದ ಬಾಷ್ಪಗಳನ್ನು ಸುರಿಸಿದರು. ಕೆಲವು ನಿಗ್ರೋ ಮಹಿಳೆಯರು ತಮ್ಮ ಆನಂದಾತಿರೇಕವನ್ನು ಸಹಿಸಲಾರದೆ ವಿಜಯಲಕ್ಷ್ಮಿಯನ್ನು ಆಲಿಂಗಿಸಿದರು. ಭಾರತದ ಸ್ವಾತಂತ್ರ್ಯಕ್ಕೆ ಅಮೇರಿಕನ್ ನಿಗ್ರೋಗಳ ಸಂಪೂರ್ಣ ಬೆಂಬಲವಿದೆಯೆಂದು ನಿಗ್ರೋ ಮುಖಂಡರು ಸ್ಪಷ್ಟವಾಗಿ ಸಾರಿದರು. ನಿಗ್ರೋ ಪತ್ರಿಕೆಗಳೂ ಅದೇ ಅಭಿಪ್ರಾಯವನ್ನು ತಮ್ಮ ಹಿರಿಬರಹಗಳಲ್ಲಿ ಮುದ್ರಿಸಿದುವು.

**ಅಮೇರಿಕನ್ ಸಿಕ್ಕರ ಸ್ವಾಗತ**

ಅಮೇರಿಕದ ಕ್ಯಾಲಿಫೋರ್ನಿಯಾ ಪ್ರಾಂತದಲ್ಲಿ ನೆಲೆಸಿರುವ ಸಾವಿರಾರು ಸಿಕ್ಕರೂ ವಿಜಯಲಕ್ಷ್ಮಿ ಪಂಡಿತರನ್ನು ಸ್ವಾಗತಿಸಿದರು. ಆ ಸಭೆಗೆ ಐದುಸಾವಿರಕ್ಕಿಂತ ಅಧಿಕ ಸಿಕ್ಕರೂ ಅವರ ಅಮೇರಿಕನ್ ಮಿತ್ರರೂ ವಿಜಯಲಕ್ಷ್ಮಿಯ ಭಾಷಣ ಕೇಳಲು ಆತುರರಾಗಿ ನೆರೆದಿದ್ದರು. ೧೯೪೫ ನೇ ಮೇ ೧೫ ನೇ ತಾರೀಖಿನ ದಿನ ಸ್ಟಾಕಟನ್ ನಗರದಲ್ಲಿ ಕೂಡಿದ ಈ ಸಭೆಯು ಚರಿತ್ರಾರ್ಹವಾದುದೇ. ಏಕೆಂದರೆ 'ಭಾರತದ ಮಾತ್ರವಲ್ಲ ಪರಾಧೀನ ಜನರೆಲ್ಲರ ಸ್ವಾತಂತ್ರ್ಯ ಪ್ರಶ್ನೆಯನ್ನು ವಿಜಯಲಕ್ಷ್ಮಿ ಪುನಃ ಕೆಣಕಿದಳು. "ಭಾರತವು ತನ್ನ ಸ್ವಾತಂತ್ರ್ಯಕ್ಕಾಗಿ ಮಾತ್ರ ಹೋರಾಟ ನಡೆಸಿಲ್ಲ. ಜಗತ್ತಿನ ಎಲ್ಲ ಭಾಗಗಳಲ್ಲಿರುವ ಪರಾಧೀನ ಜನರ ಸ್ವಾತಂತ್ರ್ಯಕ್ಕಾಗಿಯೂ ಹೋರಾಡುತ್ತಿದೆ. ಇದು ಜಾಗತಿಕ ಸ್ವಾತಂತ್ರ್ಯ ಹೋರಾಟ. ಸಾನ್ ಫ್ರಾನ್ಸಿಸ್‌ಕೋ ಪರಿಷತ್ತಿನಿಂದ ಜಗತ್ತಿನಲ್ಲಿ ಶಾಂತಿಯುಂಟಾಗಬಹುದೆಂದು

ಅನೇಕ ಅಮೇರಿಕನ್ನರ ನಿರೀಕ್ಷೆಯಾಗಿದೆ. ಅದು ಬರಿಗನಸೇಸರಿ ಏಕೆ
ದರೆ ಒಂದು ದೇಶದ ಜನತೆಯ ಅಭಿಪ್ರಾಯಕ್ಕೆ ತೀರ ವ್ಯತಿರಿಕ್ತವಾ
ಪರಕೀಯರು ಅದರ ಅದೃಷ್ಟವನ್ನು ರೂಪಿಸಲೆತ್ನಿಸುತ್ತಿದ್ದಾರೆ. ಸ್ವಾತ
ತ್ರ್ಯವೇ ಜಾಗತಿಕ ಶಾಂತಿಯ ಭದ್ರ ತಳಹದಿಯಾಗಿದೆ ಮಾನವ
ಕುಲದ ಭವಿಷ್ಯವನ್ನು ರೂಪಿಸುವ ಈ ಕಾಲದಲ್ಲಿ ಒಂದು ತಪ್ಪು ಹೆಜ್ಜೆಯ
ಟ್ಟರೆ ಕೇಡು ನಿಶ್ಚಿತ. ಕಳೆದ ಮಹಾಯುದ್ಧವು ಮುಗಿದ ಬಳಿಕ ಅ
ತಹ ತಪ್ಪು ಹೆಜ್ಜೆಯನ್ನಿಟ್ಟೆವು ಅದರ ದುಷ್ಪರಿಣಾಮವೆಷ್ಟಾಯಿತೆಂದ
ಕಣ್ಣಾರೆ ಕಂಡೆವು ! ಉಂಡೆವು. ಇನ್ನು ಅಂತಹ ಅಪರಾಧವನ್ನು ಮಾ
ದರೆ ಅದು ಅಕ್ಷಮ್ಯ; ಭಾರತದ ಸ್ವಾತಂತ್ರ್ಯವು ವಿಶ್ವದ ಸ್ವಾತಂತ್ರ್ಯ
ಪ್ರಥಮ ಹೆಜ್ಜೆಯಾಗಿದೆ ಫ್ಯಾಸಿಝಂಗೆ ಸೋಲುಂಟಾಗಿರುವುದರಿಂ
ವಿಜಯೋನ್ಮಾದಬೇಡ ಇಂಪೀರಿಯಲಿಸಂನ್ನು ನಾವು ಸೋಲಿಸಬೇಕು. ಅಷ್ಟ
ವರೆಗೆ ಜಾಗತಿಕ ಶಾಂತಿಯುಂಟಾಗದು. ಎಷ್ಟು ಸಾನ್‌ಫ್ರಾನ್ಸಿಸ್‌ಕೊ
ಪರಿಷತ್ತುಗಳು ಕೂಡಿದರೂ ವ್ಯರ್ಥ. ಆದುದರಿಂದ ಜಗತ್ತಿಗೆಲ್ಲ ಕೇಳಿಸ
ಪಂತೆ ನಾವು ಧ್ವನಿ ಮಾಡಬೇಕು. ಪ್ರಜಾಸತ್ತೆ, ಪ್ರಜಾ ಸ್ವಾತಂತ್ರ್ಯ
ಗಳ ಅಡಿಗಲ್ಲುಗಳ ಮೇಲೆ ವಿಶ್ವಶಾಂತಿಯ ಭವ್ಯಕಟ್ಟಡ ರಚಿಸುವಂ
ಕೇಳೋಣ "

**ಏಶಿಯದ ಸ್ವಾತಂತ್ರ್ಯ**

ಇನ್ನೊಮ್ಮೆ ವಿಜಯಲಕ್ಷ್ಮಿ ಮಾಡಿದ ರೇಡಿಯೋ ಭಾಷಣದಲ್ಲಿ ಏ
ಯದ ಸ್ವಾತಂತ್ರ್ಯದ ಕುರಿತು ಸಾಮ್ರಾಜ್ಯವಾದಿಗಳನ್ನು ಎಚ್ಚರಿಸಿದಳ
ಅಟಂ ಬಾಂಬಿನಿಂದ ಜಗತ್ತಿಗೆ ಗಂಡಾಂತರವಿದೆಯೆನ್ನೋ ನಿಜ ಅದ
ಅದಕ್ಕಿಂತಲೂ ಸಾಮ್ರಾಜ್ಯದ ದುರಾಶೆ ಅತಿ ಭಯಂಕರವಾದುದು ಏಶಿಯ
ಸ್ಥಿತಿಗತಿಗಳನ್ನು ವಿಮರ್ಶಿಸುವಾಗ ಅದು ಖಚಿತವಾಗುತ್ತದೆ ಏಶಿಯ
ಜನ ಸಾಮ್ರಾಜ್ಯವಾದಿಗಳ ವಿರುದ್ಧ ದಂಗೆಯೆದ್ದಿರುವರು. ಪರರ ಒಡೆತ
ಶೋಷಣೆಗಳನ್ನು ಇನ್ನು ಸಹಿಸಲಾರರು ಆದರೆ ಡಚ್ ಫ್ರೆಂಚ್ ಮತ್ತು
ಬ್ರಿಟಿಶರು ದಾಸ್ಯದ ಸಂಕೋಲೆಗಳನ್ನು ಇನ್ನಷ್ಟು ಬಿಗಿಗೊಳಿಸಲು ಯತ್ನಿಸ
ತ್ತಿದ್ದಾರೆ ಇಂಡೋನೇಶಿಯಾ ಇಂಡೋ-ಚೀನ, ಬರ್ಮಾ, ಭಾರತ, ಇರಾಣ
[illegible], ಇಜಿಪ್ತುಗಳ ಜನರ ಸ್ವಾತಂತ್ರ್ಯ ಕೋರಾಟವನ್ನು ಪಾಶವಿ
ಶಕ್ತಿಯಿಂದ ಬಗ್ಗು ಬಡಿವ ಕಾಲ ಕಳೆಯಿತು. ಈ ಎಲ್ಲ ಜನರಿಗೆ ಸ್ವಾತಂತ್ರ್ಯ

ದೊರೆಯದೆ ಏಶಿಯದಲ್ಲಿ ಶಾಂತಿಯಿಲ್ಲ ಅತೃಪ್ತ ಭಾರತವೊಂದಿದ್ದರೂ ಸಾಕು. ಏಶಿಯದಲ್ಲಿ ಸುಖವಿರಲಾರದು ಬಲದ ಬೆಂಬಲದಿಂದ ಈ ದೇಶವನ್ನು ವಜ್ರಮುಷ್ಟಿಯಲ್ಲಿಟ್ಟುಕೊಳ್ಳಲೂ ಅಶಕ್ಯ ಸಾವಿರಾರು ವರುಷಗಳ ಆದರ ಸಂಸ್ಕೃತಿಯು ಪರಂಪರೆಯೇ ವಿದೇಶೀ ನೊಗದ ಪರೆಯನ್ನು ಕಳಚಿ ಒಗೆವಷ್ಟು ಉಜ್ವಲವಿದೆ.

**ಸ್ವದೇಶಕ್ಕೆ ಪುನರಾಗಮನ**

ಅಮೇರಿಕದಲ್ಲಿ ಭಾರತದ ವೈರಿ ಮತ್ತು ವಿರೋಧಿಗಳನ್ನು "ನೆಲಕ್ಕೊಗೆದು" ೧೯೪೬ ರರ ಜನವರಿ ತಿಂಗಳಲ್ಲಿ ವಿಜಯಲಕ್ಷ್ಮಿ ಸ್ವದೇಶಕ್ಕೆ ಮರಳಿದಳು. ಅಮೇರಿಕದಲ್ಲಿ ಅವಳು ಮಾಡಿದ ಕಾರ್ಯ ಭಾರತದ ಎಲ್ಲ ದೇಶಾಭಿಮಾನಿಗಳ ಮೆಚ್ಚುಗೆಗೆ ಪಾತ್ರವಾಗಿತ್ತು. ಗಾಂಧೀಜಿಯವರೂ ಬಹಳ ಸಂತೋಷಪಟ್ಟರು ಸಾನ್‌ಫ್ರಾನ್ಸಿಕೋ ಪರಿಷತ್ತಿಗೆ ತೆರಳಿದ್ದ ನೂನ್ ಮೊದಲಾದ ಕೈಗೊಂಬೆಗಳ ಆಟವೇನೂ ನಡೆಯಲಿಲ್ಲ. "ನೂನರನ್ನು ಕುಸ್ತಿಯಲ್ಲಿ ವಿಜಯಲಕ್ಷ್ಮಿ ನೆಲಕ್ಕೆಸೆದಳು" ಎಂದು ಗಾಂಧೀಜಿ ಬಹಳ ಮಾರ್ಮಿಕ ಮಾತುಗಳನ್ನು ಹೇಳಿ ಪ್ರಶಂಸಿಸಿದರು ಆದರೆ, ಅಮೇರಿಕದಿಂದ ಭಾರತವು ಸ್ವಾತಂತ್ರ್ಯ ಹೋರಾಟಕ್ಕೆ ಸಹಾಯಸಿಗಬಹುದೆಂಬ ಮಾತಿನಲ್ಲಿ ಹುರುಳಿಲ್ಲವೆಂದು ವಿಜಯಲಕ್ಷ್ಮಿ ತನ್ನ ದೇಶಬಾಂಧವರಿಗೆ ಎಚ್ಚರಿಕೆ ಕೊಡಲು ಮರೆಯಲಿಲ್ಲ. ಅವಳು ಅದನ್ನು ಆಶಿಸಿರಲೂ ಇಲ್ಲ.

## ೯. ಉಪ ಸಂಹಾರ

ವಿಜಯಲಕ್ಷ್ಮಿ ಅಮೇರಿಕದಿಂದ ಹಿಂತಿರುಗಿದಮೇಲೆ ಭಾರತದ ರಾಜಕೀಯ ಪರಿಸ್ಥಿತಿಯಲ್ಲಿ ಮಹತ್ವದ ಬದಲಾವಣೆಗಳಾದುವು. ಹಿಂದುಸ್ತಾನಕ್ಕೆ ಸ್ವಾತಂತ್ರ್ಯದಾನ ಮಾಡದೆ ಬೇರೆ ಗತ್ಯಂತರವಿರಲಿಲ್ಲ. ದೇಶದಲ್ಲಿ ರಾಷ್ಟ್ರೀಯ ಭಾವನೆಯು ಪರಾಕಾಷ್ಠೆಗೆ ಮುಟ್ಟಿದ್ದಿತು. ಯುದ್ಧಕಾಲದಲ್ಲಿ ಆಗ್ನೇಯ ಏಶಿಯದಲ್ಲಿ ಶ್ರೀ ಸುಭಾಸ ಬೋಸರು ಹೂಡಿದ ಸ್ವಾತಂತ್ರ್ಯ ಸಮರವೂ ಸ್ವಲ್ಪ ಮಟ್ಟಿಗೆ ಅದಕ್ಕೆ ಕಾರಣ ಸ್ವದೇಶಕ್ಕೆ ಮರಳಿದ "ಆಝಾದ್ ಹಿಂದ್' ಸೈನಿಕರ ಮೇಲೆ ಜನಾಂಗವು ಬಹಳ ಸಹಾನುಭೂತಿಯನ್ನು ವ್ಯಕ್ತಪಡಿಸಿತು. ಈ ಸಹಾನುಭೂತಿ ಬ್ರಿಟಿಶರು ಸಂಘಟಿಸಿದ್ದ ಹಿಂದೀ ಸೈನ್ಯ ದಳಗಳಲ್ಲೂ ಕಾಣಿಸಿಕೊಂಡಿತು. ಅದರಿಂದ ಬ್ರಿಟಿಶ್ ಅಧಿಕಾರಿಗಳು ತಲ್ಲಣಗೊಂಡರು ಇದಲ್ಲದೆ ಹಿಂದೀ ನಾವಿಕರು ಬಹಿರಂಗ ಬಂಡಾಯವನ್ನು ಹೂಡಿ, ಕಾಂಗ್ರೆಸ್ ಧ್ವಜವನ್ನು ಹಾರಿಸಿದರು. ಇಂಥ ವಾತಾವರಣದಲ್ಲಿ ರಾಷ್ಟ್ರೀಯ ಮುಖಂಡರು ಹೋರಾಟವನ್ನು ಹೂಡಿದರೆ ಅದನ್ನು ಅಪ್ಪಳಿಸುವದು ಅಶಕ್ಯವೆಂದು ಬ್ರಿಟಿಶರಿಗೆ ಭಾಸವಾಗತೊಡಗಿತು. ೧೯೪೨ ರ ಹೋರಾಟದ ಘಟನೆಗಳನ್ನು ಅವರು ಮರೆತಿರಲಿಲ್ಲ. ಭಾರತದ ಸ್ವಾತಂತ್ರ್ಯದ ಕೂಗು ವಿದೇಶಗಳಲ್ಲೂ ಪ್ರತಿಧ್ವನಿತವಾಗಿದ್ದುದರಿಂದ ಜಾಗತಿಕ ಜನಾಭಿಪ್ರಾಯವೂ ಭಾರತಕ್ಕೆ ಸ್ವಲ್ಪ ಅನುಕೂಲವಾಗಿ ರೂಪತಾಳಲಾರಂಭಿಸಿತು ಯುದ್ಧದಿಂದ ದುರ್ಬಲವಾದ ಬ್ರಿಟನಿಗೆ ಭಾರತವನ್ನು ವಜ್ರಮುಷ್ಟಿಯಲ್ಲಿಟ್ಟುಕೊಳ್ಳಲು ಅಸಾಧ್ಯ ದೇಶದ ಆಡಳಿತೆಯೂ ಬಹು ಕಷ್ಟವಾಗಿಯೇ ಪರಿಣಮಿಸಿತು ಹೇಗಾದರೂ ಭಾರತವನ್ನು ಸಂತೈಸದೆ ಉಪಾಯವಿರಲಿಲ್ಲ ಭಾರತಕ್ಕೆ ಬಂದ ಪಾರ್ಲಿಮೆಂಟರಿ ಶಿಷ್ಟಮಂಡಳದ ಸದಸ್ಯರೂ ಸ್ವಾತಂತ್ರ್ಯದ ಬಗ್ಗೆ ಹಿಂದೀಯರಲ್ಲುಂಟಾಗಿರುವ ಅಸಂತೃಪ್ತಿಯನ್ನು ಕಂಡರು. ಬ್ರಿಟನ್ನಿನಲ್ಲಿ ಕೂಲಿಕಾರರು ಅಧಿಕಾರಕ್ಕೆ ಬಂದುದರಿಂದಲೂ ವಿಷಮ ವಾತಾವರಣವು ತಿಳಿಯಾಯಿತು. ಭಾರತದ ಸ್ನೇಹವನ್ನು ಕಳೆದುಕೊಳ್ಳಲು ಸಿದ್ಧರಿಲ್ಲದ ಬ್ರಿಟಿಶರು ಕೊನೆಗೆ

ಸ್ವಾತಂತ್ರ್ಯವನ್ನು ಮನ್ನಿಸಲು ನಿರ್ಧರಿಸಿದರು ಅದನ್ನು ಆ ಕಾರ್ಯರೂಪದಲ್ಲಿ ತರಲು ಲಾರ್ಡ ಮೌಂಟಬ್ಯಾಟನ್ನರನ್ನು ವಾಯಿಸರಾಯರನ್ನಾಗಿ ಭಾರತಕ್ಕೆ ಕಳಿಸಿದರು ಭಾರತ ಮತ್ತು ಪಾಕಿಸ್ತಾನಗಳು ತಲೆಎತ್ತಿದುವು

ಭಾರತವು ಸ್ವತಂತ್ರವಾದ ಮೇಲೆ ಎಲ್ಲ ಸಮಸ್ಯೆಗಳೂ ನಿವಾರಣೆ ಹೊಂದಲಿಲ್ಲ. ಅನೇಕ ಹೊಸ ಪ್ರಶ್ನೆಗಳು ಉದ್ಭವಿಸಿದುವು. ಪಂಜಾಬಿನ ದುರಂತವೊಂದು ಮಹಾ ಸಮಸ್ಯೆಯಾಗಿ ಪರಿಣಮಿಸಿತು. ದಕ್ಷಿಣ ಅಫ್ರಿಕದಲ್ಲಿದ್ದ ಹಿಂದಿಯರ ಮೇಲೆ ಆ ಸರಕಾರವು ಗದೆಯನ್ನು ಬೀಸಿತು. ದಕ್ಷಿಣ ಅಫ್ರಿಕನ್ ಸರಕಾರದ ಈ ವರ್ಣದ್ವೇಷದ ಕಾಯದೆ ಕಟ್ಟಳೆಗಳಿಂದ ಅಲ್ಲಿರುವ ಹಿಂದೀಯರ ಬಾಳು ಗೋಳಾಯಿತು ಈ ಅತ್ಯಾಚಾರವನ್ನು ಪ್ರತಿಭಟಿಸದೆ ಭಾರತಕ್ಕೆ ಉಪಾಯವಿರಲಿಲ್ಲ ಆದುದರಿಂದ ರಾಷ್ಟ್ರಸಂಘದಲ್ಲಿ ಈ ಪ್ರಶ್ನೆಯನ್ನು ಮಂಡಿಸಲು ಹಿಂದೀ ಸರಕಾರವು ನಿರ್ಧರಿಸಿ ಶಿಷ್ಟಮಂಡಳವನ್ನು ಕಳಿಸಿತು. ವಿಜಯಲಕ್ಷ್ಮಿ ಪಂಡಿತರು ಆ ಶಿಷ್ಟಮಂಡಳದ ನಾಯಕರಾಗಿ ತೆರಳಿದರು.

ರಾಷ್ಟ್ರ ಸಂಘದಲ್ಲಿ ಯುರೋಪಿಯನ್ ಸದಸ್ಯರೇ ಬಹಳ. ಅವರಿಗೇ ಬಹುಮತವಿದೆ ಯುರೋಪಿನಲ್ಲೆಲ್ಲ ವರ್ಣದ್ವೇಷವು ಒಂದಲ್ಲದಿದ್ದರೆ ಇನ್ನೊಂದು ರೂಪದಲ್ಲಿ ಜೀವದಿಂದಿರುವುದೇನು ಸುಳ್ಳಲ್ಲ ಅಮೇರಿಕದಲ್ಲೂ ನಿಗ್ರೋದ್ವೇಷ ಅಪಾರವಾಗಿದೆ ಲಾಟಿನ್ ಅಮೇರಿಕನ್ ದೇಶಗಳೂ ಅದಕ್ಕೆ ಹೊರಗಾಗಿಲ್ಲ ಹೀಗಿದ್ದರೂ ಕೂಡಾ ಭಾರತದ ವಿಚಾರವು ಅವರ ಮನಸ್ಸನ್ನು ಕದಡಿಸಿತು. ದಕ್ಷಿಣ ಅಫ್ರಿಕನ್ ಸರಕಾರದ ಅನ್ಯಾಯವನ್ನು ರಾಷ್ಟ್ರಸಂಘವು ಸಮರ್ಥಿಸಲಿಲ್ಲ. ಈ ವಿಜಯಕ್ಕೆ ವಿಜಯಲಕ್ಷ್ಮಿಯೇ ಕಾರಣ ಅವಳ ವಾದ, ವಾಕ್ಪಟುತ್ವ, ವಿಚಾರಸರಣಿ, ನ್ಯಾಯ ಮತ್ತು ಸತ್ಯಗಳ ಮೇಲಿನ ಆಸ್ಥೆಯಿಂದ ರಾಷ್ಟ್ರ ಸಂಘದ ಸದಸ್ಯರು ಮೆಚ್ಚಿಹೋದರು. ವರ್ಣದ್ವೇಷದ ಕತ್ತಲೆಕರಗಿ ಸರಿಸಮಾನತೆಯ ಬೆಳಕು ಹರಿದು ಬಂದಿತು. ಇದನ್ನು ಕಂಡು ಮೆಚ್ಚಿ, " ವಿಜಯಲಕ್ಷ್ಮಿ ನಂದಾದೀಪದ ನಂದಿನಿ "ಯೆಂದು ಅಮೇರಿಕನ್ ಪತ್ರಿಕೆಗಳು ಕೊಂಡಾಡಿದುವು.

ತನ್ನ ರೂಪಗುಣ, ವಿದ್ವತ್ತು, ಪ್ರತಿಭೆ, ಸೇವಾತ್ಯಾಗಗಳಿಂದ ಹಿಂದೀ ಜನಾಂಗದ ಪ್ರೀತಿಗೆ ಪಾತ್ರಳಾಗಿದ್ದ ವಿಜಯಲಕ್ಷ್ಮಿಗೆ ರಾಯಭಾರಿ ಪದವೂ ದೊರಕಿತು. ಅವಳು ರಶಿಯಾಕ್ಕೆ ಸ್ವತಂತ್ರ ಭಾರತ ರಾಯಭಾರಿಯಾಗಿ ತೆರಳಿದಳು. ಇದು ಅತ್ಯಂತ ಗೌರವದ ಕಾರ್ಯಭಾರ ಒಂದು ವರುಷ ವಾದ ಮೇಲೆ ಪುನಃ ಅವಳನ್ನು ಅಮೇರಿಕೆಗೆ ಕಳಿಸಲಾಯಿತು. ಮೊದಲೇ ಅಮೇರಿಕೆಗೆ ತೆರಳಿ ಜನರ ಪ್ರೀತ್ಯಾದರಗಳನ್ನು ಗಳಿಸಿದ್ದ ವಿಜಯಲಕ್ಷ್ಮಿ ಯನ್ನು ಅಮೇರಿಕನ್ನರು ಸಂತೋಷದಿಂದ ಸ್ವಾಗತಿಸಿರುವರು.

ಭಾರತವು ಹಿಂದೆ ಅನೇಕ ವೀರರಮಣಿಗಳನ್ನು ಪಡೆದಿತ್ತು. ಝಾನ್ಸಿ ರಾಣಿ ಮೊದಲಾದವರು ಸ್ವಾತಂತ್ರ್ಯಕ್ಕಾಗಿ ಕಲಿತನದಿಂದ ಕಾದಿರುವರು. ಈ ಶತಮಾನದಲ್ಲೂ ಅಂತಹ ವೀರರಮಣಿಯರು ಭಾರತದಲ್ಲಿ ಹುಟ್ಟಿ ಬಂದಿದ್ದಾರೆ. ಕಸ್ತೂರಿಬಾ, ಸರೋಜಿನಿ ನಾಯುಡು ಕಮಲಾ, ವಿಜಯ ಲಕ್ಷ್ಮಿ ಮೊದಲಾದ ಈ ವಿರೇಯರ ಚರಿತ್ರೆಗಳೂ ಚಿರಸ್ಮರಣೀಯವಾಗಿವೆ. ಅಪಾರ ಸಂಪತ್ತಿದ್ದರೂ ಅದನ್ನು ತ್ಯಜಿಸಿ, ದೇಶಸೇವೆಗಾಗಿ ಟೊಂಕ ಕಟ್ಟಿ ಈ ಕಾರ್ಯದಲ್ಲಿ ಅನಂತ ಕಷ್ಟ ಪರಂಪರೆಗಳನ್ನು ಅನುಭವಿಸಿ, ಹೋರಾ ಡಿದ ವಿಜಯಲಕ್ಷ್ಮಿಯು ಬಾಳು ದೊಡ್ಡ ಬಾಳೇ ಸರಿ ಹಿಂದೀ ರಮಣಿ ಯರಿಗೆ ಮಾರ್ಗದರ್ಶಕವೇ ಸರಿ